



# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

**ಹೊಂಗನಸು – 51**


ಸಂಪುಟ: ೦೬ ಸಂಚಿಕೆ: ೧ | ಎಪ್ರಿಲ್ ೨೦೧೯ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್

Vol. 06 Issue 1 | April 2019 | Pages - 8 | A. Sub. - Rs. 20/- | Editor : Sri. B.R. Ravindranath





ವಿಳಾಸ
**ಬಿ.ಎಂ.ಶ್ರೀ. ಪ್ರತಿಷ್ಠಾನ**
ಸ್ಥಾಪನೆ : ೦೬–೦೫–೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org
ಕಛೇರಿ ಸಮಯ:
ಮಧ್ಯಾಹ್ನ 12–30ರಿಂದ ಸಂಜೆ 7–30ಗಂಟೆ.
ವಾರದ ರಜೆ: ಮಂಗಳವಾರ




**‘ಹೊಂಗನಸು’ ವಿನ ಎಲ್ಲಾ ಓದುಗರಿಗೆ**
**ನೂತನ ‘ವಿಕಾರಿ ನಾಮ’ ಸಂವತ್ಸರದ ಶುಭಾಶಯಗಳು**



17–03–2019

## ‘ಟಿ.ಸುನಂದಮ್ಮ – 100ರ ನೆನಪು’

ವಿಷಯ : ಟಿ. ಸುನಂದಮ್ಮ – ಬದುಕು ಬರಹ
ಉಪನ್ಯಾಸ : ಶ್ರೀಮತಿ ನಾಗಮಣಿ ಎಸ್.ರಾವ್
ಕಿರುನಾಟಕ : ‘ಮೈಲಾರಿ ಸರಸ’
ಪ್ರದರ್ಶನ: ಶ್ರೀಮತಿ ಲಕ್ಷ್ಮೀಚಂದ್ರಶೇಖರ್ ಹಾಗೂ ಶ್ರೀ ಕೆ. ಸುಂದರ್

18 ಆಗಸ್ಟ್ 1917ರಲ್ಲಿ ಜನಿಸಿದ ಶ್ರೀಮತಿ ಟಿ. ಸುನಂದಮ್ಮ ಅವರು 29ಜನವರಿ 2006ರಲ್ಲಿ ನಿಧನರಾದರು. ಸಾಹಿತ್ಯಲೋಕ ಕಂಡ ಅಪರೂಪದ ಹಾಸ್ಯ ಲೇಖಕಿ. ಕನ್ನಡ ವಿನೋದ ಸಾಹಿತ್ಯದ ನಾಯಕಿ ಎಂದೇ ಹೆಸರಾಂತ ಬರಹಗಾರರು. ಅವರು. ಸಹಜ ಕೌಟುಂಬಿಕ ಬದುಕನ್ನು ಕುರಿತು ಬರೆದು ಕನ್ನಡಿಗರನ್ನು ಸುಮಾರು 60ವರ್ಷಗಳ ಕಾಲ ನಗಿಸಿದರು. ಇಂತಹ ಧೀಮಂತ ಮಹಿಳೆ ಸಾಹಿತಿಯ ಶತಮಾನೋತ್ಸವ ಸಂದರ್ಭದಲ್ಲಿ ಅವರನ್ನು ಸ್ಮರಿಸಿ ಗೌರವಿಸುವುದು. ಪ್ರತಿಷ್ಠಾನದ ಕರ್ತವ್ಯವೆಂದು ಈ ಕಾರ್ಯಕ್ರಮವನ್ನು ರೂಪಿಸಿರುವುದಾಗಿ ತಿಳಿಸಿ, ಅವರೊಂದಿಗೆ ನಿಕಟ ಸಂಪರ್ಕ ಮತ್ತು ಒಡನಾಟ ಹೊಂದಿದ್ದ ಶ್ರೀಮತಿನಾಗಮಣಿ ಎಸ್.ರಾವ್. ಅವರನ್ನು ಕುರಿತು ತಮ್ಮ ನೆನಪುಗಳನ್ನು ನಮ್ಮೆಲ್ಲರೊಂದಿಗೆ ಹಂಚಿಕೊಳ್ಳುವವರಿದ್ದಾರೆಂದು ತಿಳಿಸಿ, ಡಾ. ಆರ್. ಲಕ್ಷ್ಮೀನಾರಾಯಣ ಅವರು ಕಾರ್ಯಕ್ರಮದ ಬಗ್ಗೆ ಪ್ರಾಸ್ತಾವಿಕ ನುಡಿಗಳನ್ನಾಡಿ ಉಪನ್ಯಾಸಕರನ್ನು ಸಭೆಗೆ ಪರಿಚಯಿಸಿ ಎಲ್ಲರಿಗೂ ಸ್ವಾಗತ ಕೋರಿದರು.

ಇದೇ ಸಂದರ್ಭದಲ್ಲಿ “ಮೈಲಾರಿ ಸರಸ” ವೆಂಬ ಕಿರು ಪ್ರಹಸನ/ ಪ್ರಸಂಗವನ್ನು ಪ್ರದರ್ಶಿಸಲು ಆಗಮಿಸಿದ್ದ ಶ್ರೀಮತಿ ಲಕ್ಷ್ಮೀ ಚಂದ್ರಶೇಖರ ಮತ್ತು ಶ್ರೀ ಕೆ. ಸುಂದರ್ ಅವರನ್ನು ಸಭೆಗೆ ಪರಿಚಯಿಸಲಾಯಿತು.

ಶ್ರೀಮತಿ ಸುನಂದಮ್ಮ ಅವರೊಂದಿಗೆ ನಿಕಟ ಸಂಪರ್ಕ ಮತ್ತು ಬಾಂಧವ್ಯ ಹೊಂದಿದ ಶ್ರೀಮತಿ ನಾಗಮಣಿ ಯವರು ಬಹಳ ಸ್ವಾರಸ್ಯಕರವಾದ ಬಾಲ್ಯ ಜೀವನ ಕೌಟುಂಬಿಕ ಹಿನ್ನೆಲೆ ಅವರ ಬಾಲ್ಯ ವಿವಾಹ ಮುಂತಾದ ವಿಷಯಗಳನ್ನು ತಮ್ಮ ನೆನಪಿನಾಳದಿಂದ ಸಭಿಕರೊಂದಿಗೆ ಹಂಚಿಕೊಂಡರು. ತಿಂಗಳಿಗೊಮ್ಮೆ ಮಹಿಳಾ ಸಾಹಿತಿಗಳು ಸೇರಿ ನಡೆಸುತ್ತಿದ್ದ “ಮಹಿಳಾ ಸಾಹಿತ್ಯ ಕೂಟ”ದ ಚಟುವಟಿಕೆಗಳನ್ನು ತಿಳಿಸಿದರು. ಅವರು ಅಪಹಾಸ್ಯದ ಸಾಹಿತ್ಯ ಬರೆಯುತ್ತಿರಲಿಲ್ಲ. ಸಂಪ್ರದಾಯಸ್ಥ, ಮಹಿಳಾ ಸೇವಾ ಸಮಾಜದ ಕಾರ್ಯಕ್ರಮಗಳಲ್ಲಿ ಅವರು ತೊಡಗಿಸಿಕೊಳ್ಳುತ್ತಿದ್ದ ಸಂದರ್ಭಗಳು, ಅಲ್ಲಿ ನಡೆಸುತ್ತಿದ್ದ ಹಿಂದಿ ತರಗತಿಗಳಲ್ಲಿ ಭಾಗವಹಿಸಿ ತಮ್ಮ ಅರಿವನ್ನು ವಿಸ್ತಾರಗೊಳಿಸಿಕೊಳ್ಳುತ್ತಿದ್ದ ರೀತಿ, ಕೊರವಂಜಿ ಮಾಸ ಪತ್ರಿಕೆಯೊಂದಿಗಿನ ಅವರ ಇಪ್ಪತ್ತೈದು ವರ್ಷದ ಬೆಸುಗೆ, ಆಕಾಶವಾಣಿಯಲ್ಲಿ ಅವರ ಪ್ರಹಸನಗಳು ಪ್ರಸಾರವಾಗುತ್ತಿದ್ದ ದಿನಗಳು, ಮುಂತಾದ ನೆನಪಿನ ಮಾಲಿಕೆಯನ್ನು ಬಿಚ್ಚಿಟ್ಟರು. ಕೊರವಂಜಿ ವಿನೋದ ಪತ್ರಿಕೆಗಳಲ್ಲಿ ನಿರಂತರವಾಗಿ ನಗೆ ಬರಹಗಳನ್ನು ಬರೆದರು.

1994ರಲ್ಲಿ ಅಖಿಲ ಕರ್ನಾಟಕ ಮಹಿಳಾ ಸಾಹಿತ್ಯ ಸಮ್ಮೇಳನಾಧ್ಯಕ್ಷತೆ, ರಾಜ್ಯೋತ್ಸವ ಪ್ರಶಸ್ತಿ, ಅತ್ತಿಮಬ್ಬೆ ಪ್ರಶಸ್ತಿ ಅವರಿಗೆ ಸಂದ ಸನ್ಮಾನ, ಗೌರವಗಳು.ಅವರು 2006ಜನವರಿ 29ರಂದು ಕಣ್ಮರೆಯಾದರೆಂದು ತಿಳಿಸಿದರು.

3 ನೇ ಪುಟಕ್ಕೆ







ಮೈಲಾರನ ಸರಸ ಕಿರು ನಾಟಕದ ಒಂದು ದೃಶ್ಯ

## ಸಂಪಾದಕೀಯ

ಇದೀಗ ಲೋಕಸಭಾ ಚುನಾವಣೆಯ ಪ್ರಕ್ರಿಯೆಗಳು ವಿಧ್ಯುಕ್ತವಾಗಿ ಆರಂಭಗೊಂಡಿವೆ. ಇದೊಂದು ಆಶಾಕಿರಣವಿಲ್ಲದ, ನಿರಾಸೆ ಮೂಡಿಸುವಂತಹ ಚುನಾವಣೆಯಾಗಿ ಹೊರಹೊಮ್ಮಿದೆ. ಅದೇ ಪ್ರಮುಖ ರಾಜಕೀಯ ಪಕ್ಷಗಳ ಅದೇ ಪ್ರಮುಖ ರಾಜಕೀಯ ನಾಯಕರು ಅದೇ ಸವಕಲು ಹಾಗೂ ನಂಬಲನರ್ಹವಾದ ಆಶ್ವಾಸನೆಗಳನ್ನು ನೀಡುತ್ತಾ ಚುನಾವಣೆಯಲ್ಲಿ ಸ್ಪರ್ಧಿಗಳಾಗಿದ್ದಾರೆ. ಪಕ್ಷಾತೀತವಾಗಿ ನೋಡಿದರೂ ಕಂಡುಬರುವುದು ವೈಫಲ್ಯಗಳ ಹೊರೆ ಹೊತ್ತಿರುವ ನಾಯಕರು ಹಾಗೂ ರಾಜಕೀಯ ಪಕ್ಷಗಳು ಚುನಾವಣೆಯಲ್ಲಿರುವುದು. ಆಸೆ ತೋರಿಸಿ ನಿರಾಸೆ ಉಂಟುಮಾಡಿರುವ ನಾಯಕರು, ಮತದಾರರಿಗೆ ಸ್ವರ್ಗ ತೋರಿಸಿ ನರಕಕ್ಕೆ ತಳ್ಳಿರುವ ನಾಯಕರು, ಆಸೆಯನ್ನೂ ತೋರಿಸಲಾಗದ ನಾಯಕರು, ಅದಕ್ಷತೆ ಅಥವಾ ಭ್ರಷ್ಟಾಚಾರಗಳ ಕಳಂಕಗಳನ್ನು ಹೊತ್ತಿರುವ ನಾಯಕರು, ಕುಟುಂಬ ಹಿನ್ನಲೆಯ ಅರ್ಹತೆ ಮಾತ್ರ ಹೊಂದಿ ನಾಯಕರೂ ಆಗಿಲ್ಲದ ಉಮೇದವಾರರು, ಚಟಕ್ಕಾಗಿ ಕಣದಲ್ಲಿರುವ ಉಮೇದುವಾರರು ಹೀಗೆ ಹತ್ತು ಹಲವು ಬಗೆಯ ಅಭ್ಯರ್ಥಿಗಳು ಜನರಲ್ಲಿ ಮತ ಭಿಕ್ಷೆಯನ್ನು ಬೇಡುತ್ತಿದ್ದಾರೆ.

ಇಂತಹ ಉಮೇದುವಾರರು ನೀಡುತ್ತಿರುವ ಆಶ್ವಾಸನೆಗಳ ಪೈಕಿ ಪ್ರಮುಖವಾದವು ಹಲವಾರು ರೀತಿಯ ಉಚಿತ ಸೌಲಭ್ಯಗಳು, ಸಾಲ ಮನ್ನಾಗಳು ಇತ್ಯಾದಿ. ಇಂತಹ ಆಶ್ವಾಸನೆಗಳನ್ನು ಪೂರೈಸಲು ತೆರಿಗೆದಾರರು ಪಾವತಿಸುವ ತೆರಿಗೆ ಹಣದ ಬಳಕೆ ಅನಿವಾರ್ಯಎಂಬುದು ಎಲ್ಲರಿಗೂ ತಿಳಿದಿದ್ದರೂ ತೆರಿಗೆದಾರರ ವತಿಯಿಂದ ಯಾವ ಪ್ರತಿಕ್ರಿಯೆಗಳೂ ಕಂಡುಬರುತ್ತಿಲ್ಲ.

ಈ ಚುನಾವಣೆಯಲ್ಲಿ ಅಪಾರ ಸಂಖ್ಯೆಯಲ್ಲಿ ಯುವ ಜನರು ಮತ ನೀಡಲಿದ್ದಾರೆ.ಬಹಳಷ್ಟು ಯುವಜನರಿಗೆ ಸಾಮಾಜಿಕ ಮಾಧ್ಯಮಗಳೇ ಸರ್ವಸ್ವವಾಗಿದ್ದು ಅವುಗಳಲ್ಲಿ ಮೂಡಿಬರುವ ಅಭಿಪ್ರಾಯಗಳೇ ಏಕೈಕ ಸತ್ಯವೆಂದು ನಂಬುವವರು ಗಣನೀಯ ಸಂಖ್ಯೆಯಲ್ಲಿರುತ್ತಾರೆ. ಇಂತಹ ಅನನುಭವೀ ಹೆಚ್ಚು ತಿಳುವಳಿಕೆ ಇಲ್ಲದ ಯುವ ಜನರು ತಮ್ಮ ಆಯ್ಕೆ ಮಾಡುವ ಅಧಿಕಾರವನ್ನು ಜವಾಬ್ದಾರಿಯುತವಾಗಿ ಚಲಾಯಿಸುತ್ತಾರೆ ಎಂಬುದನ್ನು ನಂಬುವುದು ಕಠಿಣ.

ಜೊತೆಗೆ ಈ ಚುನಾವಣೆಯಲ್ಲಿಯೂ ಮಹಿಳಾ ಪ್ರಾತಿನಿಧ್ಯಕ್ಕೆ ಆದ್ಯತೆ ಇಲ್ಲದಿರುವುದೂ ಮತ್ತೊಂದು ನಿರಾಸೆ.

ಇಂತಹ ನಿರಾಸೆಯ ವಾತಾವರಣದಲ್ಲಿ ಬುದ್ಧಿ ಜೀವಿಗಳು ಏನು ಮಾಡಬಹುದು?

ಬಿ.ಆರ್ ರವೀಂದ್ರನಾಥ್
ಸಂಪಾದಕರು

## ಏಪ್ರಿಲ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಶಾಂತರಸ | 04-04-1929 |
| ಫರ್ಡಿನಾಂಡ್ ಕಿಟೆಲ್ | 08-04-1832 |
| ಆರ್. ನರಸಿಂಹಚಾರ್ | 09-04-1861 |
| ಆನಂದಕಂದ ಬೇಟಗೇರಿ ಕೃಷ್ಣಶರ್ಮಾ | 16-04-1900 |
| ತರಾಸು | 21-04-1920 |
| ಬೀಚಿ | 23-04-1913 |
| ಪಿಕ್ರೆನ್ | 22-04-1849 |
| ತಿರುಮಲೆ ತಾತಾಚಾರ್ಯ ಶರ್ಮಾ | 27-04-1985 |

## ಏಪ್ರಿಲ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಭಾರತಿಸುತ | 04-04-1976 |
| ತರಾಸು | 10-04-1984 |
| ಎಂ.ಎಸ್. ಪುಟ್ಟಣ್ಣ | 11-04-1930 |
| ಗಳಗನಾಥರು | 22-04-1942 |
| ವಿಕೃ ಗೋಕಾಕ್ | 28-04-1992 |

## ಪ್ರಕಟಣೆ

ಬಿ.ಎಂ.ಶ್ರೀ ಪ್ರತಿಷ್ಠಾನವು ವಾರ್ಷಿಕವಾಗಿ ಕೊಡಮಾಡುವ 2019ನೇ ಇಸವಿಯ ಡಾ. ವಿಜಯಾ ಸುಬ್ಬರಾಜ್ ದತ್ತಿಯ 'ಗಣ್ಯಲೇಖಕಿ ಪ್ರಶಸ್ತಿ'ಗೆ ಖ್ಯಾತ ಕವಿಯತ್ರಿ ಶ್ರೀಮತಿ ಲಲಿತಾ ಸಿದ್ಧಬಸವಯ್ಯ ಅವರನ್ನು ಆಯ್ಕೆ ಸಮಿತಿಯು ಆಯ್ಕೆ ಮಾಡಿದೆ.

ಪ್ರಶಸ್ತಿಯನ್ನು ಏಪ್ರಿಲ್ 11, 2019 ನೇ ಗುರುವಾರದಂದು ಸಂಜೆ 6.00 ಗಂಟೆಗೆ ಪ್ರತಿಷ್ಠಾನದಲ್ಲಿ ನಡೆಯುವ ಸಮಾರಂಭದಲ್ಲಿ ಡಾ. ಪಿ.ವಿ.ನಾರಾಯಣ ಅವರು ಪ್ರದಾನ ಮಾಡುತ್ತಾರೆ.

## ಕಿರು ಪರಿಚಯ

### ವಿದುಷಿ ಶ್ರೀಮತಿ ಗಿರಿಜಾ ಶಾಸ್ತ್ರಿ

* ಹಿಂದೂಸ್ಥಾನಿ ಗಾಯನದಲ್ಲಿ ವಿದ್ವತ್,
* ವಿಶಾರದ,
* ತಬಲಾ ಪ್ರಾರಂಭಿಕ ಮತ್ತು ಪ್ರವೇಶಿಕ ಪ್ರಥಮ,
* ಕರ್ನಾಟಕ ಸಂಗೀತದಲ್ಲಿ ಸೀನಿಯರ್, ಸಂಗೀತದಲ್ಲಿ ವಿಶೇಷ ವ್ಯಾಸಂಗ
* ದಿ॥ ಪಂಡಿತ್ ಆರ್.ವಿ. ಶೇಷಾದ್ರಿ ಗವಾಯಿ, ವಿದುಷಿ ಲಕ್ಷ್ಮಿ ಕುಲಕರ್ಣಿ, ಪಂಡಿತ್ ವಿ.ಎಂ ನಾಗರಾಜ್, ಪಂಡಿತ್ ಕುರುಡಿ ನಂದಕುಮಾರ್ ಮತ್ತು ಪಂಡಿತ್ ರಾಘವೇಂದ್ರ ಗುಡಿಇವರೆಲ್ಲರ ಮಾರ್ಗದರ್ಶನದಲ್ಲಿ ಹಿಂದೂಸ್ತಾನಿ ಗಾಯನದಲ್ಲಿ ಉನ್ನತ ಕಲಿಕೆ
* ದಿ॥ಜಿ.ವಿ. ಅತ್ರಿಯವರ ಮಾರ್ಗದರ್ಶನದಲ್ಲಿ 'ಸಂಗೀತ ಗಂಗಾ' ದಲ್ಲಿ ಮತ್ತು ಡಾ. ಹೇಮಾ ಪ್ರಸಾದ್ ಅವರಲ್ಲಿ ಸುಗಮ ಸಂಗೀತದ ಕಲಿಕೆ(1997-2000)
* ಸೌಂದರ್ಯ ಲಹರಿ, ಶಿವಾನಂದಲಹರಿ, ವಿಷ್ಣು ಸಹಸ್ರನಾಮಗಳ ಸಂಪೂರ್ಣ ಪಠಣ/ ಗಾಯನ ಕಲಿಸುವುದು
* ಮುಂಬೈ ನಗರದಲ್ಲಿ ಶ್ರೀಮತಿ ವಿದುಷಿ ಪದ್ಮಾ ಸುಬ್ರಮಣ್ಯಂ ಅವರ ಮಾರ್ಗದರ್ಶನದಲ್ಲಿ ಕರ್ನಾಟಕ ಸಂಗೀತದ ಗಾಯನದ ಕಲಿಕೆ ಹಾಗೂ ಬರೋಡದಲ್ಲಿ ವಿದುಷಿ ಪದ್ಮಾ ರಾಜಗೋಪಾಲನ್ ರ ಬಳಿ ಕರ್ನಾಟಕ ಸಂಗೀತದ ಕಲಿಕೆ

ಸಂಗೀತದಲ್ಲಿ ಮತ್ತಿತರ ಸಾಧನೆಗಳು

* ಸಂಗೀತ ವಿದ್ಯಾರ್ಥಿಗಳಿಗೆ 1997ರಿಂದ ಕರ್ನಾಟಕ ಹಿಂದೂಸ್ತಾನಿ, ಸುಗಮ ಸಂಗೀತ ,ಭಜನೆಗಳ ವೃತ್ತಿಪರ ತರಗತಿಗಳನ್ನು ನಡೆಸುತ್ತಿದ್ದಾರೆ.
* ಹಲವಾರು ಸಂಸ್ಥೆಗಳ ಆಶ್ರಯದಲ್ಲಿ ಸಂಗೀತ ಕಚೇರಿಗಳನ್ನು ನೀಡಿದ್ದಾರೆ.

## ಡಾ॥ ಎಸ್. ರಮಾದೇವಿ ಅವರಿಗೆ "ಕುವೆಂಪು ವಿಶ್ವಮಾನವ ಕನ್ನಡ ರತ್ನ' ಪ್ರಶಸ್ತಿ

ರಾಷ್ಟ್ರ ಕವಿ ಕುವೆಂಪುರವರ 115ನೇ ಜಯಂತಿ ಪ್ರಯುಕ್ತ ಏರ್ಪಡಿಸಿದ್ದ ಕುವೆಂಪು ಸಾಂಸ್ಕೃತಿಕ ಉತ್ಸವ ಕಾರ್ಯಕ್ರಮದಲ್ಲಿ ಡಾ॥ ಎಸ್. ರಮಾದೇವಿ ಅವರಿಗೆ "ಕುವೆಂಪು ವಿಶ್ವಮಾನವ ಕನ್ನಡ ರತ್ನ' ಪ್ರಶಸ್ತಿ ನೀಡಿ ಗೌರವಿಸಲಾಗಿದೆ.

# ಏಪ್ರಿಲ್ ೨೦೧೯ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿ.ಎಂ.ಶ್ರೀ. ಪ್ರತಿಷ್ಠಾನ

### 11 –04–2019 ಗುರುವಾರ ಸಂಜೆ– 6–00 ಗಂಟೆಗೆ

**ಡಾ. ವಿಜಯಾ ಸುಬ್ಬರಾಜ್ ದತ್ತಿಯ ಗಣ್ಯ ಲೇಖಕಿ ಪ್ರಶಸ್ತಿ ಪ್ರದಾನ**

ಪ್ರಶಸ್ತಿ ಪ್ರದಾನ ಮತ್ತು ಅಧ್ಯಕ್ಷತೆ : ಡಾ. ಪಿ.ವಿ.ನಾರಾಯಣ

ಪ್ರಶಸ್ತಿ ಪುರಸ್ಕೃತರು : ಶ್ರೀಮತಿ ಲಲಿತಾ ಸಿದ್ಧಬಸವಯ್ಯ



### 15–4–2019 ಸೋಮವಾರ ಸಂಜೆ–6–00ಗಂಟೆಗೆ

**ಡಾ. ಉಪ್ಪಂಗಳ ರಾಮಭಟ್ಟ, ಎಂ.ಕೆ. ವಿಜಯಲಕ್ಷ್ಮಿ, ಸುಬ್ಬಯ್ಯ ಹೆಗ್ಗಡೆ ಶಾಸ್ತ್ರಿ ದತ್ತಿ ಉಪನ್ಯಾಸ**

ಉಪನ್ಯಾಸ : ಡಾ. ರಾಮಲಿಂಗಪ್ಪ ಟಿ. ಬೇಗೂರು

ವಿಷಯ : ಕನ್ನಡ ಕಾವ್ಯದ ಈಚಿನ ಪ್ರವೃತ್ತಿಗಳು

### 25–04–2019 ಗುರುವಾರ ಸಂಜೆ–6–00 ಗಂಟೆಗೆ

**ಶ್ರೀ ಸಿ.ಕೆ.ನಾಗರಾಜರಾವ್, ಶ್ರೀ ಕೆ.ಪಿ.ರಾವ್, ಶ್ರೀ ಕೊರಟಿಶ್ರೀನಿವಾಸರಾವ್ದತ್ತಿ**

ವಿಷಯ : ಸಾಹಿತ್ಯ ಮತ್ತು ಐತಿಹಾಸಿಕತೆ

ಉಪನ್ಯಾಸ : ಡಾ.ಬಿ. ರಾಜಶೇಖರಪ್ಪ

ನಿವೃತ್ತ ಕನ್ನಡ ಪ್ರಾಧ್ಯಾಪಕರು



### 26–4–2018 ಶುಕ್ರವಾರ ಸಂಜೆ– 6–00 ಗಂಟೆಗೆ

**ಸಾಹಿತ್ಯ ವಿಹಾರ**

ಸಾಕ್ಷ್ಯ ಚಿತ್ರ ಪ್ರದರ್ಶನ



### 29–4–2018 ಸಂಜೆ– 6–00 ಗಂಟೆಗೆ

"ಅಕ್ಕರಗೊಟ್ಟಿ"–49

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ : ಲೌಕಿಕ–ಆಗಮಿಕ – ಒಂದು ಪುನರ್ ಚಿಂತನೆ

ಚಾಲನೆ ನೀಡುವವರು : ಪ್ರೊ. ಬಿ.ಪಿ. ವೀರೇಂದ್ರಕುಮಾರ್,

ನಿವೃತ್ತ ಕನ್ನಡ ಪ್ರಾಧ್ಯಾಪಕರು

**ಒಂದನೇ ಪುಟದಿಂದ**



ಶ್ರೀ ಟಿ. ಸುನಂದಮ್ಮ ಅವರ ಕೃತಿಗಳನ್ನು ಆಧರಿಸಿ ರಚಿಸಿದ "ಮೈಲಾರಿ ಸರಸ" ಕಿರುನಾಟಕ ವನ್ನು ರಚಿಸಿದ ಹೆಸರಾಂತ ಕಿರುತೆರೆನಟ ಶ್ರೀ ಕೆ. ಸುಂದರ್ ಅವರು ಶ್ರೀಮತಿ ಲಕ್ಷ್ಮೀ ಚಂದ್ರಶೇಖರ್ ಅವರ ಜೊತೆ ಇಪ್ಪತ್ತು ನಿಮಿಷದ ಈ ಕಿರುನಾಟಕವನ್ನು ಪ್ರದರ್ಶಿಸಿದರು. ಶ್ರೀಮತಿ ಟಿ. ಸುನಂದಮ್ಮ ಅವರ ಬಗ್ಗೆಯ ಪತ್ರಿಕಾ ಪ್ರಕಟಣೆಗಳನ್ನು ಶ್ರೀ ಮುಂ. ಅ. ವೆಂಕಟೇಶ್ ಅವರು ಪ್ರದರ್ಶಿಸಿದ್ದರು. ಕಾರ್ಯಕ್ರಮದ ಯಶಸ್ಸಿಗೆ ಕಾರಣರಾದ ಎಲ್ಲರನ್ನೂ ಡಾ. ವಿಜಯಾಸುಬ್ಬರಾಜ್ ಅವರು ವಂದಿಸಿದರು.

ಪ್ರತಿಷ್ಠಾನದ ಸದಸ್ಯರಾದ **ಶ್ರೀ ಈರಬಸಪ್ಪ, ಎಸ್. ಪರತಬಾಧಿ** ಅವರು ಜಿಲ್ಲಾ ಪರಿಷತ್ ಪ್ರಾಥಮಿಕ ಕನ್ನಡ ಶಾಲೆ, ನಾಲವಾರ ವಸ್ತಿ, ಕರಜಿಗಿ ತಾ॥ ಅಕ್ಕಲಕೋಟ, ಸೋಲಾಪುರ ಜಿಲ್ಲೆಯ ಗಡಿನಾಡಿನಲ್ಲಿ ಸಹಾಯಕ ಶಿಕ್ಷಕರಾಗಿ ಸೇವೆ ಸಲ್ಲಿಸಿದ್ದಾರೆ. ವಿಜಯಪುರ ಜಿಲ್ಲೆ ಕನ್ನಡ ಸಾಹಿತ್ಯ ಪರಿಷತ್ತು ಶ್ರೀಯುತರನ್ನು 2018–19ನೇ ಸಾಲಿನ ಉತ್ತಮ ಶಿಕ್ಷಕನೆಂದು ಗುರುತಿಸಿ 27–1–2019ರಂದು "ಉತ್ತಮ ಶಿಕ್ಷಕ ಪ್ರಶಸ್ತಿ" ನೀಡಿ ಸನ್ಮಾನಿಸಲಾಯಿತು.

### 'ಅವಲೋಕನ'

ನೀವು ರಚಿಸಿದ ಸಾಹಿತ್ಯ ಕೃತಿಯ ವಿಮರ್ಶೆಯನ್ನು ಪ್ರಕಟಿಸಬೇಕೆ? ಕನ್ನಡ ಭಾಷೆಯಲ್ಲಿ ಹೊಸದಾಗಿ ಅಂದರೆ ಕಳೆದ ಮೂರು ತಿಂಗಳುಗಳ ಅವಧಿಯಲ್ಲಿ ಪ್ರಕಟಗೊಳ್ಳುವ ಮೌಲಿಕ ಸಾಹಿತ್ಯ ಕೃತಿಗಳನ್ನು ಹೊಂಗನಸು ಓದುಗರಿಗೆ ಪರಿಚಯಿಸುವ ಉದ್ದೇಶದಿಂದ ನಾವು ಹೊಸ ಅಂಕಣವನ್ನು ಆರಂಭಿಸಿದ್ದೇವೆ. ಈ ಶೀರ್ಷಿಕೆಯಡಿಯಲ್ಲಿ ಪ್ರತಿ ತಿಂಗಳೂ ಹೊಂಗನಸುವಿನಲ್ಲಿ 'ಅವಲೋಕನ' ಅಂಕಣದಲ್ಲಿ ಹೊಸದಾಗಿ ಪ್ರಕಟವಾದ ಮೌಲಿಕವಾದ ಸಾಹಿತ್ಯ ಕೃತಿಗಳ ವಿಮರ್ಶೆಗಳನ್ನು ಪ್ರಕಟಿಸಲಾಗುತ್ತಿದೆ. ಆಸಕ್ತ ಲೇಖಕರು ಕಳೆದ ಮೂರು ತಿಂಗಳುಗಳ ಅವಧಿಯಲ್ಲಿ ಪ್ರಕಟಗೊಂಡ ಕೃತಿಗಳ ಒಂದು ಪ್ರತಿಯನ್ನು ನಮಗೆ ತಲುಪಿಸಬಹುದು. ಈ ಅಂಕಣಕ್ಕಾಗಿ ಸ್ವೀಕರಿಸಿದ ಕೃತಿಗಳ ಪ್ರತಿಗಳನ್ನು ಹಿಂದುರಿಗಿಸಲಾಗುವುದಿಲ್ಲ.

# ಬಿ.ಎಂ.ಶ್ರೀ ಪ್ರತಿಷ್ಠಾನದ ಕಾರ್ಯಕ್ರಮಗಳು

ದಿನಾಂಕ : 22–2–2019

## ಅಕ್ಕರಗೊಟ್ಟಿ ಕಾರ್ಯಕ್ರಮ–47

## ವಿಷಯ : "ಪಂಚಕೇಶ್ವರ" – ಒಂದು ವಿಶ್ಲೇಷಣೆ

ಚಾಲನೆ ನೀಡಿದವರು : ಶ್ರೀ ಎಂ.ಎನ್. ಪ್ರಭಾಕರ್

ಶ್ರೀ ಮನೆವಾರ್ತೆ ಪ್ರಭಾಕರ್ ಅವರು ವಿಶ್ರಾಂತ ಬ್ಯಾಂಕ್‌ನ ಅಧಿಕಾರಿಗಳು ಬ್ಯಾಂಕ್ ಉದ್ಯೋಗದಲ್ಲಿದ್ದುಕೊಂಡು ಶಾಸನಗಳು, ಅವುಗಳ ಐತಿಹಾಸಿಕ ಮಹತ್ವ ಹಾಗೂ ದಕ್ಷಿಣಭಾರತದಲ್ಲಿ ಹಾಗೂ ವಿಶೇಷವಾಗಿ ಕರ್ನಾಟಕ ವಿವಿಧ ಪ್ರದೇಶಗಳಲ್ಲಿ ಕಂಡುಬರುವ ದೇವಸ್ಥಾನಗಳಲ್ಲಿನ ವೈವಿದ್ಯಾ, ರಚನಾ ಶೈಲಿ, ಗೋಪುರಗಳಲ್ಲಿನ ವಾಸ್ತುಶಿಲ್ಪದ ವೈವಿಧ್ಯತೆ, ಕಂಬಗಲ್ಲಿನ ವೈವಿಧ್ಯತೆ, ಹೀಗೆ ಹಲವಾರು ವಿಷಯಗಳಲ್ಲಿ ಆಸಕ್ತಿ ಬೆಳೆಸಿಕೊಂಡು. ಅವುಗಳ ಬಗ್ಗೆ ಅಭ್ಯಾಸಿಸಲು ಪ್ರಾರಂಭಮಾಡಿದರು. ವ್ಯಾಪಕವಾಗಿ ಅಧ್ಯಯನದಲ್ಲೂ, ತೊಡಗಿಕೊಂಡು ಹಲವಾರು ಸಂಶೋಧನಾತ್ಮಕ ಲೇಖನಗಳನ್ನು ಮಂಡಿಸಿದ್ದಾರೆ. ಹಾಗೇ ಹಲವಾರು ಪ್ರಕಟಣೆಗಳೂ ಹೊರ ಬಂದಿವೆ. ಎಂ.ವಿ.ಸೀ ಅವರ ಕಾಲದಲ್ಲೇ ಪ್ರತಿಷ್ಠಾನದಲ್ಲಿ ಸದಸ್ಯತ್ವವನ್ನು ಹೊಂದಿದ್ದ ಇವರ ಕೆಲವ ವಿದ್ವತ್ ಪೂರ್ಣ ಲೇಖನಗಳು ಲೋಚನದಲ್ಲಿ ಪ್ರಕಟಣೆಗೊಂಡಿವೆ. ದೇವಸ್ಥಾನಗಳಲ್ಲಿನ ಶೈಲಿ, ಅವುಗಳನ್ನು ಕಾಲಘಟ್ಟದಲ್ಲಿ ಗುರುತಿಸುವಿಕೆ, ತೌಲನಿಕ ಅಧ್ಯಯನ, ಮುಂತಾದ ವಿಷಯಗಳ ಬಗ್ಗೆ ತಿಳಿಯುವ ಆಸಕ್ತರಿಗೆ ಅವರ ಪ್ರಕಟಣೆಗಳು ಸಹಾಯವಾಗುತ್ತದೆ. ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಆರ್. ಲಕ್ಷ್ಮೀನಾರಾಯಣ ಅವರು ಹೀಗೆ ಶ್ರೀ ಎಂ.ಎನ್. ಪ್ರಭಾಕರ ಅವರನ್ನು ಪರಿಚಯಿಸಿ, ಚರ್ಚೆಗೆ ಚಾಲನೆ ನೀಡಲು ವೇದಿಕೆಯನ್ನು ಪ್ರಭಾಕರ್ ಅವರಿಗೆ ನೀಡಲಾಯಿತು.

"ಪಂಚಕೇಶ್ವರ"ದ ಪ್ರಾಚೀನ ಉಲ್ಲೇಖ ಕ್ರಿ.ಶ 870ರ ಅಮೋಘ ವರ್ಷದ ಕಾಲದ್ದು ತಮ್ಮ ಮನೆಯಿಂ "ಪಂಚಕೇಶ್ವರಮಂ ಪೊರಮಡಿಸಿ ಓದಿಸಿ ಆ ಅರ್ಥಮಂ ಪೂಜಿಸುವವರು" ಇದು ಶಾಸನದ ಸಾಲುಗಳು. ಇದು ಆಚರಣೆ, ಸಂಪ್ರದಾಯ ಎನ್ನುವುದು ಸ್ಪಷ್ಟ ಆದರೆ ಆಚರಣೆಯ ಸ್ವರೂಪ ವಿವರಗಳು ಖಚಿತವಾಗದು. ಕ್ರಿ.ಶ. 13–14ನೆ ಶತಮಾನದಲ್ಲಿ ಈ ಪದವು "ಪಂಚಕೇಶ್ವರ" ಎಂದಿದ್ದು ಬೇಲೂರು ಶಾಸನಗಳಲ್ಲಿ "ಪಂಚಕೇಶ್ವರದ ಐಂದ್ರದ ಧರ್ಮಕ್ಕೆ, ಪಂಚಕೇಶ್ವರದ ಧರ್ಮ ನಡೆಸುವಂತಾಗಿ ಎಂಬ ಒಕ್ಕಣೆಗಳಿವೆ.

ಹಳೇ ಬೀಡಿನ ಶಾಸನದಲ್ಲಿ "ಪಂಚಕೇಶ್ವರದ ಓದಿದ ಬ್ರಾಹ್ಮಣರ ಪೂಜೆಗೋಸ್ಕರ" ಎಂದಿದೆ. ಈ ಶಾಸನಗಳಿಂದಲೂ ಆಚರಣೆಯ ಸ್ವರೂಪ ವ್ಯಕ್ತವಾಗದು.

ಶ್ರೀ ಆರ್. ವೆಂಕಟೇಶ್ವರ ಮೂರ್ತಿಯವರು ಇತಿಹಾಸದಲ್ಲಿ ಈ ಆಚರಣೆಯ ಮೂಲವನ್ನು ತಿಳಿಯಲು ಶ್ರಮವಹಿಸಿದ್ದಾರೆ. ಆದ–ರೆ ಇದಮಿತ್ಥಂ ಎಂದು ಹೇಳಲು ಸಾಧ್ಯವಾಗಿಲ್ಲ. ಪುನಃ 2012ರಲ್ಲಿ ಈ ವಿಚಾರವನ್ನು ಪ್ರಸ್ತಾಪಿಸಿ "ಪಂಚಕೇಶ್ವರ" ದೇವರ ಹೆಸರೆನ್ನುತ್ತಾರೆ. ಡಾ. ಎಂ.ಚಿದಾನಂದ ಮೂರ್ತಿಯವರೂ ಈ ಅಭಿಪ್ರಾಯವನ್ನು ಮಂಡಿಸಿದ್ದರೂ ಯಾವ ಆಧಾರವನ್ನು ಸಮರ್ಪಕವಾಗಿ ನೀಡಿಲ್ಲ.

ಡಾ. ಎಸ್. ಶೆಟ್ಟರ್ ಅವರು ತಮ್ಮ "ಸೋಮನಾಥಪುರ" ಗ್ರಂಥದಲ್ಲಿ ಸೋಮನಾಥಪುರದ ಪಂಚಲಿಂಗ ದೇವಾಲಯದ ದೇವರನ್ನು "ಪಂಚಕೇಶ್ವರ" ಎಂದು ಹಲವು ಬಾರಿ ಗುರುತಿಸಿದ್ದಾರೆ. ಈ ದೇವರಿಗೆ ಸಂಬಂಧಿಸಿದ ಶಾಸನಗಳೆಲ್ಲವೂ "ಪಂಚಲಿಂಗ" ಎಂದೇ ದೇವರನ್ನು ಹೆಸರಿಸಿವೆ. ಇವರು "ಪಂಚಕೇಶ್ವರ" ಎನ್ನಲು ಯಾವ ಆಧಾರವೋ ತಿಳಿಯದು. ಶಾಸಗಳಲ್ಲಿ ಅರ್ಧವಿರಾಮ, ಪೂರ್ಣಾವಿರಾಮ ಚಿಹ್ನೆಯಾಗಲಿ, ಪದವಿಂಗಡಣೆಯಾಗಲಿ ಇರಲು ಸಾಧ್ಯವಿಲ್ಲ. ಶಾಸನಗಳ ಪದವಿಂಗಣೆ, ಓದುವಿಕೆಯಲ್ಲಿ, ಆಗುವ ಅಭ್ಯಾಸಗಳಿಂದ ಈ ರೀತಿಯ ನಿರ್ಣಯಗಳಿಗೆ ಬರಲು ಸಾಧ್ಯ. "ಪಂಚಕೇಶ್ವರ" ಎನ್ನುವುದು ಆಚರಣೆಯೇ ಹೊರತು ದೇವರ ಹೆಸರಲ್ಲಿ ಈ ಆಚರಣೆಯ ಬಗ್ಗೆ ಖಚಿತ ಮಾಹಿತಿಯೂ ಈವರೆಗೆ ಲಭ್ಯವಿಲ್ಲ.

ಹೀಗೆ ವಿಷಯದ ಬಗ್ಗೆ ಇರುವ ವಸ್ತು ಸ್ಥಿತಿಯನ್ನು ತಿಳಿಸಿ, ಚರ್ಚೆಗೆ ಆಹ್ವಾನ ನೀಡಿದರು.

ಚರ್ಚೆಯಲ್ಲಿ ಡಾ. ಆರ್. ಲಕ್ಷ್ಮೀನಾರಾಯಣ, ಡಾ.ವಿ. ಸಂಧ್ಯಾ, ಡಾ. ನಳಿನಿ ವೆಂಕಟೇಶ್. ಡಾ. ನಳಿನ ಮತ್ತು ಕೆಲವು ಅಕಾಡೆಮಿ ಸದಸ್ಯರುಗಳು ಭಾಗವಹಿಸಿದ್ದರು ವಿಶೇಷವಾಗಿತ್ತು. ದೀರ್ಘವಾದ ಚರ್ಚೆಯ ನಂತರವೂ ವಿಷಯದ ಬಗ್ಗೆ ಒಮ್ಮತಕ್ಕೆ ಬರಲಾಗದೆ, ಮೇಲೆ ಹೇಳಿದ ಎರೆಡೂ ವಿಶ್ಲೇಷಣೆಗಳು. ಸಂದರ್ಭಾನುಸಾರ ತೆಗೆದುಕೊಂಡಲ್ಲಿ ಸರಿಕಾಣಬಹುದೆಂಬ ಅಭಿಪ್ರಾಯಕ್ಕೆ ಬರಲಾಯಿತು.

ಶ್ರೀ ಬಿ.ಎಸ್. ಗುರುಪ್ರಸಾದ್ ಸಂಯೋಜನಾಧಿಕಾರಿಗಳು, ಶ್ರೀ ಎಂ.ಎನ್. ಪ್ರಭಾಕರ್ ಅವರಿಗೂ ಮತ್ತು ಚರ್ಚೆಯಲ್ಲಿ ಭಾಗವಹಿಸಿದ ಎಲ್ಲಾ ವಿದ್ವಾಂಸರಿಗೂ ವಂದಿಸಿದರು.

ದಿನಾಂಕ: 08–3–2019

## "ಶ್ರೀಮತಿ ರಂಗನಾಯಕಮ್ಮ –ಶ್ರೀ ಜಿ.ಸುಬ್ಬರಾವ್ ದತ್ತಿ" ಕಾರ್ಯಕ್ರಮ

ಹಾಡುಗಾರಿಕೆ : ಕುಮಾರಿ ಐಶ್ವರ್ಯ ಮಣಿಕರ್ಣಿಕೆ.
ವಿದ್ಯಾರ್ಥಿನಿ ಮತ್ತು ಆಕಾಶವಾಣಿ ಕಲಾವಿದೆ.

ಪ್ರಾರಂಭದಲ್ಲಿ ಶ್ರೀ ಬಿ.ಎಸ್. ಗುರುಪ್ರಸಾದ್ ಅವರು ತಮ್ಮ ಪ್ರಾಸ್ತಾವಿಕ ನುಡಿಗಳ ಮೂಲಕ ದತ್ತಿದಾನಿಗಳನ್ನು ಹಾಗೂ ಈ ದಿನದ ಸಂಗೀತ ಕಲಾವಿದರಾದ ಕುಮಾರಿ ಐಶ್ವರ್ಯ ಮಣಿಕರ್ಣಿಕೆ, ಪಿಟೀಲುವಾದಕ ಶ್ರೀ ಕೃತಿಕ್ ಕೌಶಿಕ್, ಬಿ.ಕಾಂ. ವಿದ್ಯಾರ್ಥಿ ಮತ್ತು ಮೃದಂಗವಾದಕಿ ವಿದುಷಿ




ಶ್ರೀಮತಿ ರಂಜನಿ ವೆಂಕಟೇಶ್, ಆಕಾಶವಾಣಿ ಕಲಾವಿದರು ಇವರುಗಳನ್ನು ಸಭೆಗೆ ಪರಿಚಯಿಸಿ, ಎಲ್ಲರನ್ನೂ ಸ್ವಾಗತಿಸಿದರು.

ಆಕಾಶವಾಣಿ ಕಲಾವಿದೆ, ಇಂಜನಿಯರಿಂಗ್ ವಿದ್ಯಾರ್ಥಿನಿ, ಭರತನಾಟ್ಯ ಕಲಾವಿದೆ ಮತ್ತು ವೀಣೆ/ ಹಾಡುಗಾರಿಕೆಯವಿದ್ಯಾರ್ಥಿನಿ ಕುಮಾರಿ ಐಶ್ವರ್ಯ ಮಣಿಕರ್ಣಿಕೆ, ಕುಟುಂಬದ ಹಿರಿಯರಿಂದಲೇ ಸಂಗೀತಾಭ್ಯಾಸದ ಪ್ರಾರಂಭ. ಪ್ರತಿಷ್ಠಿತ, ಕಾರ್ಯಕ್ರಮಗಳಲ್ಲಿ ಕಚೇರಿ ನಡೆಸಿಕೊಟ್ಟು ಕಾರ್ಯಕ್ರಮ ನೀಡುವ ಯುವ ಪ್ರತಿಭೆಯಾಗಿ ಕರ್ನಾಟಕ, ತಮಿಳುನಾಡುಗಳಲ್ಲೂ ಗುರುತಿಸಿಕೊಂಡಿದ್ದಾರೆ. 2018 ಮತ್ತು 2019ರಲ್ಲಿ ರಾಗಂ, ತಾನಂ, ಪಲ್ಲವಿ ಸ್ಪರ್ಧೆಗಳಲ್ಲಿ ಪ್ರಥಮ ಸ್ಥಾನ ಪಡೆದಿದ್ದಾರೆ.

ಕುಮಾರಿ ಐಶ್ವರ್ಯ ಮಣಿಕರ್ಣಿಕೆ ತಮ್ಮ ಕಚೇರಿಯನ್ನು ಶ್ರೀ ಮುತ್ತುಸ್ವಾಮಿ ದೀಕ್ಷಿತರ 'ಶ್ರೀ ಮಹಾಗಣಪತಿ' ಎಂಬ ಕೃತಿಯಿಂದ ಆರಂಭಿಸಿ, ಆಭೋಗಿ ರಾಗಕ್ಕೆ ಅಳವಡಿಸಿದ ಈ ಕೃತಿಯ ಕಲ್ಪನಾ ಸ್ವರಗಳನ್ನು ಬಹಳ ಕಲಾತ್ಮಕವಾಗಿ ಪ್ರಸ್ತುತ ಪಡಿಸಿದರು.

ಎರಡನೇ ಪ್ರಸ್ತುತಿ ಶ್ರೀ ಮುತ್ತಯ್ಯ ಸ್ವಾಮಿ ದೀಕ್ಷಿತರ ಕೃತಿ

'ಭುವನೇಷ್ವರಿಯ ನೆನೆ ಮಾನಸವೆ' ಸಭಿಕರ ಮೆಚ್ಚುಗೆಗೆ ಪಾತ್ರವಾಯಿತು. ಮುಂದೆ ಶ್ರೀಮೈಸೂರು ವಾಸುದೇವಾಚಾರ್ಯರ ರಚನೆ 'ಪರಿಪಾಹಮಾಮ್ ಶ್ರೀ ದಾಶರಥೇ' ಬಹಳ ಅದ್ಭುತವಾಗಿ ಮೂಡಿ ಬಂದಿತು. ಶುಭಪಂತವರಾಳಿ ರಾಗದ ಈ ಕೃತಿಯ ಆಲಾಪನೆ, ನೆರವಲ್ ಹಾಗು ಸ್ವರ ವಿಸ್ತಾರ ಸಭಿಕರನ್ನು ಬೇರೊಂದು ಲೋಕಕ್ಕೆ ಕರದೊಯ್ದಿತು.

ಡಾ. ಎಸ್. ಅನಿಲ್ ಕುಮಾರ್ ಅವರ ವಂದನಾರ್ಪಣೆಯ ನಂತರ ಕಾರ್ಯಕ್ರಮ ಸಂಪನ್ನವಾಯಿತು.

ದಿನಾಂಕ : 11–03–2019

## ಶ್ರದ್ಧಾಂಜಲಿ ಸಭೆ

ದಿವಂಗತ ಶ್ರೀ ಕೋ. ಚೆನ್ನಬಸಪ್ಪ ಅವರ ಶ್ರದ್ಧಾಂಜಲಿ ಸಭೆ.

ಫೆಬ್ರವರಿ 23, 2019ರಂದುತಮ್ಮ 97ನೇ ವಯಸ್ಸಿನಲ್ಲಿ ಸಾಹಿತ್ಯ ಲೋಕವನ್ನು ಬಿಟ್ಟು ಅನಂತದೆಡೆಗೆ ನಡೆದ ಶ್ರೀ ಕೋ.ಚೆನ್ನಬಸಪ್ಪ ಅವರಿಗೆ ಪ್ರತಿಷ್ಠಾನವು ದಿನಾಂಕ ಮಾರ್ಚ್11 ರಂದು ಶ್ರದ್ಧಾಂಜಲಿ ಸಭೆಯನ್ನು ಏರ್ಪಡಿಸಿತ್ತು. ಕೋ.ಚೆನ್ನಬಸಪ್ಪ ಅವರೊಂದಿಗೆ ಒಡನಾಟ ಹೊಂದಿದ್ದ ಖ್ಯಾತ




ಬರಹಗಾರರು ಹಾಗೂ ಹಿರಿಯ ಪತ್ರಕರ್ತರಾದ ಶ್ರೀ ಲಕ್ಷ್ಮಣಕೊಡಸೆ, ಪ್ರತಿಷ್ಠಾನದ ಗೌರವಾಧ್ಯಕ್ಷರಾದ ನಾಡೋಜ ಪ್ರೊ. ಎಂ.ಎಚ್. ಕೃಷ್ಣಯ್ಯ ಮತ್ತು ಡಾ. ಜಿ. ರಾಮಕೃಷ್ಣ ಅವರುಗಳು ಹಾಜರಿದ್ದು ಶ್ರದ್ಧಾಂಜಲಿ ಸಭೆಯನ್ನು ನಡೆಸಿಕೊಟ್ಟರು.

ಡಾ. ಆರ್. ಲಕ್ಷ್ಮೀನಾರಾಯಣ ಅವರು ಕೋ.ಚೆನ್ನಬಸಪ್ಪ ಅವರ ಸಂಕ್ಷಿಪ್ತ ಪರಿಚಯ ಮಾಡಿದರು. ನುಡಿನಮನ ಸಲ್ಲಿಸಲು ಕೋ.ಚೆನ್ನಬಸಪ್ಪ ಅವರ ಅಭಿಮಾನಿಗಳು ಸಾಕಷ್ಟು ಸಂಖ್ಯೆಯಲ್ಲಿ ಆಗಮಿಸಿದ್ದರು.

ಶಾಂತಿ ಮಂತ್ರದೊಂದಿಗೆ ಸಭೆಯು ಆರಂಭವಾಯಿತು.

ಕೋ.ಚೆನ್ನಬಸಪ್ಪ ಅವರು ರಚಿಸಿರುವ ಸಾಹಿತ್ಯವು ವಿಶಿಷ್ಟವಾದದು ಮತ್ತು ಅಮೂಲ್ಯವಾದದು. ಶೋಚನೀಯ ಸಂಗತಿಯೆಂದರೆ ಇವರ ಯಾವ ಕೃತಿಗಳೂ ವಿಮರ್ಶಕರ ಗಮನಕ್ಕೆ ಬಾರದೆ ಇದ್ದದ್ದು. ಕಾರಣ, ಅವರದು ನೇರ ನುಡಿ, ನಿಖರವಾದ ಬರಹ. ನ್ಯಾಯಾಧೀಶರಾಗಿದ್ದ ಕೋಚೆಯವರಿಗೆ ದಾಖಲೆಗಳಿಲ್ಲದೆ ಬರೆಯುವುದು ದುಸ್ಸಾಧ್ಯವಾಗಿತ್ತು. ಅವರು ಕನ್ನಡಲ್ಲಿ ಬರೆ–ಯುತ್ತಿದ್ದ ತೀರ್ಪುಗಳು, ಈಗಲೂ ಸಹ ಮಾದರಿಯಾಗಿದೆ ಎಂದು ಕೋಡಸೆ ಅವರು ತಮ್ಮ ಒಡನಾಟ ಮತ್ತು ಕೆಲವು ಮರೆಯಲಾಗದ ಅನುಭವಗಳನ್ನು ಸ್ಮರಿಸಿಕೊಂಡರು.

ನಾಡೋಜ ಎಂ.ಎಚ್.ಕೃಷ್ಣಯ್ಯನವರು ಕೋ.ಚೆನ್ನಬಸಪ್ಪ ಅವರೊಂದಿಗೆ ನಿಕಟ ಒಡನಾಟ ಹೊಂದಿದ್ದವರು. ಕೆಲವು ವಿಷಯಗಳಲ್ಲಿ ಕೋ.ಚೆನ್ನಬಸಪ್ಪ ಅವರ ದಿಟ್ಟವಾದ ಮತ್ತು ಸ್ಥಿರವಾದ ನಿಲುವುಗಳನ್ನು ಸಂದರ್ಭಗಳೊಂದಿಗೆ ಹಂಚಿಕೊಂಡರು. ಕನ್ನಡ ಪುಸ್ತಕ ಪ್ರಾಧಿಕಾರವು ಅವರ ವಿಶಿಷ್ಟವಾದ ಮತ್ತು ಅಮೂಲ್ಯವಾದ ಬರಹಗಳನ್ನು ಪ್ರಕಟಿಸಿದರೆ, ಯುವ ಪೀಳಿಗೆಗೆ ಮಾರ್ಗದರ್ಶನವಾದುವುದರಲ್ಲಿ ಸಂದೇಹವಿಲ್ಲ. ಈ ಕಾರ್ಯ ತ್ವರಿತವಾಗಿ ಆಗಬೇಕಿದೆ. ಕೋಚೆ ಅವರು ಜೀವಂತವಾಗಿರುವಾಗಲೇ ಆಗಬೇಕಿದ್ದ ಕೆಲಸ, ಈಗಲಾದರೂ ಆಗಲಿ ಎಂದು ಆಶಿಸಿದರು.

ಡಾ. ಜಿ.ರಾಮಕೃಷ್ಣ ಅವರು ಕೋ.ಚೆನ್ನಬಸಪ್ಪ ಅವರ 'ದೇಶ ಒಡೆಯಿತು – ಬೇಡಿ ಕಳಚಿತು' ಎಂಬ ಸಾವಿರ ಪುಟಗಳ ಕಾದಂಬರಿಯಲ್ಲಿ ದೇಶದ ಸ್ವಾತಂತ್ರ್ಯದ ಬಗೆಗಿನ ಅವರ ವಿಚಾರಗಳನ್ನು ಮತ್ತು ನಿಲುವುಗಳನ್ನು ಕೊಂಡಾಡಿದರು. ಕೋ.ಚೆನ್ನಬಸಪ್ಪ ಅವರು ನಿಷ್ಠುರವಾದಿಗಳಾಗಿದ್ದ ಕಾರಣ ಸಾಹಿತ್ಯ ಅಕಾಡೆಮಿಯಾಗಲೀ ಅಥವಾ ಇತರೇ ಸಂಸ್ಥೆಗಳಾಗಲೀ, ಅವರ ಸಾಹಿತ್ಯ ಸೇವೆಯನ್ನು ಗುರುತಿಸಲಿಲ್ಲ. ಸಾಹಿತ್ಯ ಅಕಾಡೆಮಿಯ ಹಾಗಾಗಿ ಪ್ರಶಸ್ತಿಗಳಿಂದ ವಂಚಿತರಾದರು ಎಂದು ಬೇಸರ ವ್ಯಕ್ತಪಡಿಸಿದರು.

ಡಾ.ವಿಜಯಾಸುಬ್ಬರಾಜ್ ಅವರು ನುಡಿನಮನ ಸಲ್ಲಿಸಿದ ಗಣ್ಯರಿಗೂ ಮತ್ತು ಶ್ರದ್ಧಾಂಜಲಿ ಸಭೆಗೆ ಆಗಮಿಸಿದ್ದ ಎಲ್ಲರನ್ನೂ ವಂದಿಸಿದರು.

20.02.2019

## ಸಾಹಿತ್ಯ ಸಂಚಲನ – 8




ಉಪನ್ಯಾಸಕಿ: ಡಾ. ಕೆ.ಎಸ್.ಚೈತ್ರ

ಉಪನ್ಯಾಸದ ವಿಷಯ: ಜಾವಳಿಗಳು

ನೃತ್ಯ ಕ್ಷೇತ್ರವನ್ನು ಬಲ್ಲವರಿಗೆ ಅಭಿನಯ ಪ್ರಧಾನವಾದ, ಶೃಂಗಾರ ರಸಕ್ಕೆ ಹೆಚ್ಚು ಪ್ರಾಮುಖ್ಯತೆ ಇರುವ ನೃತ್ಯ ಪ್ರಕಾರ ಜಾವಳಿ ಎಂದು ತಿಳಿದಿರುತ್ತದೆ. ಆದರೆ ಸಾಮಾನ್ಯರಿಗೆ ಹೆಚ್ಚು ಪರಿಚಿತವಲ್ಲದ ಜಾವಳಿ ಸಾಹಿತ್ಯದ ಬಗ್ಗೆ ನೃತ್ಯ ಕಲಾವಿದೆ ಡಾ. ಕೆ.ಎಸ್. ಚೈತ್ರರವರು ಸಾಕಷ್ಟು ವಿಷಯಗಳನ್ನು ತಿಳಿಸಿದರು. ಬಿ.ಎಂ.ಶ್ರೀ ಪ್ರತಿಷ್ಠಾನದ ಸಹಯೋಗದಲ್ಲಿ ಕರ್ನಾಟಕ ಲೇಖಕಿಯರ ಸಂಘ ಏರ್ಪಡಿಸುತ್ತಿರುವ ಸಾಹಿತ್ಯ ಸಂಚಲನದ ಎಂಟನೆಯ ಕಾರ್ಯಕ್ರಮದಲ್ಲಿ, ಫೆಬ್ರವರಿ 20ರಂದು ಪ್ರಾತ್ಯಕ್ಷಿಕೆಗಳ ಮೂಲಕ ಜಾವಳಿಗಳ ಸ್ವರೂಪ ಹಾಗೂ ಅದರ ಸಾಹಿತ್ಯದ ಬಗ್ಗೆ ಉಪಯುಕ್ತ ಮಾಹಿತಿ ನೀಡಿದರು. ವೃತ್ತಿಯಿಂದ ದಂತ ವೈದ್ಯೆಯಾಗಿರುವ ಡಾ. ಕೆ.ಎಸ್. ಚೈತ್ರ ಉತ್ತಮ ಲೇಖಕಿ ಹಾಗೂ ವಾಗ್ಮಿ ಎನ್ನುವುದು ನಿಸ್ಸಂಶಯ. ಭರತನಾಟ್ಯದಲ್ಲಿ ನೃತ್ಯ ಬಂಧ ಜಾವಳಿಗಳ ಬಗ್ಗೆ ಸಂಶೋಧನೆ ನಡೆಸಲು 2014ನೇ ಸಾಲಿನ ಕೇಂದ್ರ ಸರ್ಕಾರದ ಫೆಲೋಶಿಪ್ ಪಡೆದಿರುವ ಚೈತ್ರರವರು ನಿರರ್ಗಳವಾಗಿ ಜಾವಳಿಗಳ ಬಗ್ಗೆ ಒಂದು ಗಂಟೆಗೂ ಹೆಚ್ಚು ಕಾಲ ಮಾತನಾಡಿ, "ದ್ರಾವಿಡ ಭಾಷೆಗಳಲ್ಲಿ ಸಾವಿರಕ್ಕೂ ಹೆಚ್ಚು ಜಾವಳಿಗಳು ರಚನೆಯಾಗಿವೆ. ಕನ್ನಡದಲ್ಲಿ ಸುಮಾರು 200 ಜಾವಳಿಗಳು ದೊರೆತಿದ್ದರೂ ಅವುಗಳಲ್ಲಿ ಕೆಲವು ಮಾತ್ರವೇ ರಂಗದ ಮೇಲೆ ಪ್ರದರ್ಶಿತವಾಗಿವೆ" ಎಂದರು.

ಜಾವಳಿ ಸಾಹಿತ್ಯಕ್ಕೆ ಕರ್ನಾಟಕದ ಕೊಡುಗೆ ಅತ್ಯಮೂಲ್ಯ. ಸಂಗೀತ, ಸಾಹಿತ್ಯ, ನಾಟಕ, ನೃತ್ಯಗಳಿಗೆ ಅಪಾರ ಪ್ರೋತ್ಸಾಹ ನೀಡುತ್ತಿದ್ದ ಮೈಸೂರು ಅರಸರ ಕಾಲ ಜಾವಳಿಗೆ 'ಸುವರ್ಣಯುಗ' ಎನ್ನಬಹುದು ಎಂಬ ಅಭಿಪ್ರಾಯ ವ್ಯಕ್ತಪಡಿಸಿದ ಚೈತ್ರರವರು, ರಾಜಾಶ್ರಯದಲ್ಲಿ ಗೌರವಾನ್ವಿತವಾಗಿದ್ದ ಈ ನೃತ್ಯ ಪದ್ಧತಿ ಬ್ರಿಟಿಷರ ಕಾಲದಲ್ಲಿ ಮಹಿಳೆಯರ ಶೋಷಣೆಗೆ ದಾರಿಯಾಗಿ ದುರುಪಯೋಗವಾಗತೊಡಗಿತು. ಅನಂತರ ಈಗ ಮತ್ತೆ ಭರತನಾಟ್ಯ ಹಾಗೂ ಕೂಚುಪುಡಿ ನೃತ್ಯಗಳಲ್ಲಿ ಸೇರ್ಪಡೆಯಾಗಿ, ಸ್ವೀಕೃತವಾಗುತ್ತಿವೆ. ಕೆಲವು ಜಾವಳಿಗಳಲ್ಲಿ ಅಂಕಿತವನ್ನೂ ಕಾಣಬಹುದು. ವ್ಯಾಸರಾಯರು, ಹೆಳವನಕಟ್ಟೆ ಗಿರಿಯಮ್ಮ, ಹುಲ್ಲಹಳ್ಳಿ ರಾಮಣ್ಣ ಮುಂತಾದವರು ಜಾವಳಿಗಳನ್ನು ರಚಿಸಿದ್ದಾರೆ ಎಂದರು.

ಜಾವಳಿಯಂತೆಯೇ ನರ್ತನಕ್ಕೆ ಉಪಯೋಗವಾಗುವ ಮತ್ತೊಂದು ಸಾಹಿತ್ಯ ರಚನೆ ಪದಂ. ಜಾವಳಿ ಮತ್ತು ಪದಂಗಳಿಗಿರುವ ವ್ಯತ್ಯಾಸವೆಂದರೆ ಪದದಲ್ಲಿ ಕಾಣುವ ನಾಯಕ ದೇವರಾಗಿರುತ್ತಾನೆ. ಜಾವಳಿಯಲ್ಲಿ ಮಹಾರಾಜನೋ, ಪೋಷಕನೋ ಆಗಿದ್ದು ಸಾಮಾನ್ಯ ಮನುಷ್ಯನಾಗಿರುತ್ತಾನೆ.

ಮೈಸೂರು ಸಂಸ್ಥಾನದ ಚಾಮರಾಜ ಒಡೆಯರ್ ಅವರಿಗಾಗಿ ಚಿನ್ನಯ್ಯ, ಪೊನ್ನಯ್ಯ ಪಡಿವೇಲು ಖ್ಯಾತಿಯ ಚಿನ್ನಯ್ಯನವರು 12 ಜಾವಳಿಗಳನ್ನು ರಚಿಸಿದ್ದಾರೆ. ಮೈಸೂರರಸರು ಜಾವಳಿಗಳ ಪೋಷಕರೂ ಹಾಗೂ ಸ್ವತಃ ರಚನಕಾರರೂ ಆಗಿದ್ದುದು ವಿಶೇಷ. ಕಂದ ಪದ್ಯವನ್ನು ಹಾಡಿದ ನಂತರ ಜಾವಳಿಗಳನ್ನು ಪ್ರದರ್ಶಿಸುವುದು ಅಂದು ಸಾಮಾನ್ಯವಾಗಿತ್ತು. ಜಾವಳಿಗಳನ್ನು ನರ್ತಿಸಲೇಬಾರದು, ಮಹಿಳೆಯರು ಪ್ರತ್ಯಕ್ಷ ನೋಡದೆ ಪರದೆಗಳ ಹಿಂದಿನಿಂದ ನೋಡಬೇಕೆಂಬ ನಿಬಂಧನೆಗಳಿದ್ದವು. ಜಾವಳಿಯು ಶೃಂಗಾರ ಪ್ರಧಾನವಾದ ರಚನೆಯಾದರೂ ಭಕ್ತಿಪ್ರಧಾನವೂ ಆಗಿದ್ದು, ಜೀವಾತ್ಮರಾದ ಎಲ್ಲರೂ ಪರಮಾತ್ಮನಿಗೆ ಆತ್ಮಾರ್ಪಣೆ ಮಾಡಿಕೊಳ್ಳುವ ಮಾರ್ಗವೂ ಆಗಿದೆ ಎಂದರು.

ಅಂದಿನ ಅತಿಥಿಗಳಾಗಿದ್ದ ಡಾ.ವಿಜಯಾ ಸುಬ್ಬರಾಜ್‌ರವರು 40 ವರ್ಷಗಳ ಹಿಂದೆ ತಾವು ಅಧ್ಯಯನ ಮಾಡಿದ್ದ ಗೀತನಾಟಕಗಳಲ್ಲಿ ಕಂಡುಬಂದಿದ್ದ ಜಾವಳಿಗಳನ್ನು ನೆನಪು ಮಾಡಿಕೊಂಡರು. ತೆಲುಗು ಪೌರಾಣಿಕ ಚಲನಚಿತ್ರಗಳಲ್ಲಿ ಜಾವಳಿಗಳು ಹೇರಳವಾಗಿವೆ. ನವೋದಯದ ರಚನೆಗಳಲ್ಲಿಯೂ ಜಾವಳಿಗಳ ಸ್ವರೂಪವನ್ನು ಗುರುತಿಸಲು ಅವಕಾಶಗಳಿವೆ ಎಂದರು. ಸಭೆಯ ಅಧ್ಯಕ್ಷತೆ ವಹಿಸಿದ್ದ ಕಲೇಸಂ ಅಧ್ಯಕ್ಷೆ ವನಮಾಲಾ ಸಂಪನ್ನಕುಮಾರರವರು 'ಈ ಹಿಂದೆ ಅಶಿಕ್ಷಿತರು ಆರಿಸಿಕೊಂಡ ಸಾಹಿತ್ಯ ಪ್ರಕಾರ ಇಂದು ಪ್ರಜ್ಞಾವಂತರ ಗಮನಕ್ಕೆ ಬಂದು, ಹೆಚ್ಚಿನ ಅಧ್ಯಯನಕ್ಕೆ ಒಳಗಾಗಿರುವುದು ಹಾಗೂ ಜನಸಾಮಾನ್ಯರಿಗೂ ರಂಗರೂಪದಲ್ಲಿ ತಲುಪುತ್ತಿರುವುದು ಸಂತಸದ ವಿಷಯ' ಎಂದರು.

ಅಂದಿನ ಸಭೆಗೆ ಮುಖ್ಯ ಅತಿಥಿ ಡಾ. ಚೈತ್ರರವರನ್ನು ಸಂಘದ ಸದಸ್ಯೆ ಸವಿತಾ ನಾಗೇಶ್ ಪರಿಚಯಿಸಿದರು. ಕಾರ್ಯದರ್ಶಿ ನಾಗರತ್ನ ಚಂದ್ರಶೇಖರ್ ಸ್ವಾಗತ ಕೋರಿದರು. ಸಹಕಾರ್ಯದರ್ಶಿ ಜಿ.ವಿ.ನಿರ್ಮಲ ವಂದನಾರ್ಪಣೆ ಸಲ್ಲಿಸಿದರು.

ದಿನಾಂಕ: 23-02-2019

## "ಬೇಂದ್ರೆ ನಮನ ಕಾರ್ಯಕ್ರಮ"

ಕವಿತೆಗಳ ಗಾಯನ ಸ್ಪರ್ಧೆ

ವರಕವಿ ದ.ರಾ.ಬೇಂದ್ರೆಅವರ ಜನ್ಮದಿನದ ಅಂಗವಾಗಿ (ಜನ್ಮದಿನ 31-1-1896), ದ.ರಾ.ಬೇಂದ್ರೆ ಅವರು ರಚಿಸಿರುವ "ಕವಿತೆಗಳ ಗಾಯನ" ಸ್ಪರ್ಧೆಯನ್ನು ಪ್ರತಿಷ್ಠಾನದ ಎಂ.ವಿ.ಸೀ ಸಭಾಂಗಣದಲ್ಲಿ ಆಯೋಜಿಸಲಾಗಿತ್ತು. ಫೆಬ್ರವರಿ ಮೊದಲವಾರದಲ್ಲೇ ಪತ್ರಿಕಾ ಪ್ರಕಟಣೆಯನ್ನೂ ನೀಡಲಾಗಿತ್ತು. ಈ ಸ್ಪರ್ಧೆಯಲ್ಲಿ 22 ಗಾಯಕರು ಭಾಗವಹಿಸಿದ್ದರು. ಸ್ಪರ್ಧೆಯಲ್ಲಿ ಕಿರಿಯರು ಮತ್ತು ಹಿರಿಯರೂ ಭಾಗವಹಿಸಿದ್ದ ಕಾರಣ, ತೀರ್ಪುಗಾರರು ಸ್ಪರ್ಧಿಗಳನ್ನು ಕಿರಿಯರ ವಿಭಾಗ (ವಯಸ್ಸು 5ರಿಂದ 18 ವರ್ಷ) ಮತ್ತು ಹಿರಿಯರ ವಿಭಾಗ (ವಯಸ್ಸು 18ವರ್ಷ ಮೇಲ್ಪಟ್ಟು)ವೆಂದು ವಿಭಾಗ ಮಾಡಿದ್ದರು.



ಡಾ. ಆರ್. ಲಕ್ಷ್ಮೀನಾರಾಯಣ ಅವರು ಕಾರ್ಯಕ್ರಮದ ಬಗ್ಗೆ ಪ್ರಾಸ್ತಾವಿಕ ನುಡಿಗಳನ್ನಾಡಿ, ಸ್ಪರ್ಧಿಗಳಿಗೆ ದ.ರಾ. ಬೇಂದ್ರೆಯವರ ಜೀವನ ಮತ್ತು ಸಾಧನೆಗಳನ್ನು ತಿಳಿಸಿದರು. ಬೇಂದ್ರೆಯವರಿಂದ ಒಂದು ಕಾವ್ಯಪರಂಪರೆ ಉಚ್ಛ್ರಾಯ ಸ್ಥಿತಿಯನ್ನು ತಲುಪಿದ್ದನ್ನು ವಿವರಿಸಿದರು. ಅವರ ಕಾವ್ಯಗಳಲ್ಲಿ ಸೌಂದರ್ಯ ಚಿತ್ರಣ ಮತ್ತು ಜೀವನದ ಸಂಕಷ್ಟಗಳ ನಿರೂಪಣೆ ಸಂಸ್ಕೃತಿ-ನಾಗರೀಕತೆ, ಹೀಗೆ ಹಲವಾರು ವಿಷಯಗಳು ಆವಿಷ್ಕಾರ ಪಡೆದಿರುವುದನ್ನು ಕಾಣಬಹುದು ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

ಸ್ಪರ್ಧಿಗಳ ಪೋಷಕರು, ಬೇಂದ್ರೆ ಅಭಿಮಾನಿಗಳು ಅಪಾರ ಸಂಖ್ಯೆಯಲ್ಲಿ ಆಗಮಿಸಿ ಸಭಾಂಗಣ ತುಂಬಿತ್ತು. ವಿಜಯನಗರದ ಪ್ರಥಮ ದರ್ಜೆ ಕಾಲೇಜಿನಿಂದ ದೃಷ್ಟಿದೋಷವಿರುವ ಏಳು ವಿದ್ಯಾರ್ಥಿಗಳು ಆಗಮಿಸಿದ್ದರು. ದೃಷ್ಟಿ ದೋಷವಿರುವ ಇಬ್ಬರು ವಿದ್ಯಾರ್ಥಿಗಳೂ ಬಹುಮಾನ ಸ್ವೀಕರಿಸಿದ್ದಾರೆ. ಸ್ಪರ್ಧಿಗಳ ಸಾಮರ್ಥ್ಯವನ್ನು ಅಳೆಯಲು ತೀರ್ಪುಗಾರರಾಗಿ

ವಿದುಷಿ: ಶ್ರೀಮತಿ ಎಂ.ವಿ. ಸುಕನ್ಯ ಮತ್ತು

ವಿದುಷಿ ವಿಜಯ ಗೋಪಾಲಕೃಷ್ಣ ಅವರು ಆಗಮಿಸಿದ್ದರು. ಅಧ್ಯಕ್ಷರು ಸರ್ವರನ್ನು ಸ್ವಾಗತಿಸಿ, ಸ್ಪರ್ಧೆಗೆ ಚಾಲನೆ ನೀಡಿದರು.

ಸ್ಪರ್ಧೆಯಲ್ಲಿ ವಿಜೇತರಾದವರು

ಕಿರಿಯರ ವಿಭಾಗ (6ವರ್ಷದಿಂದ 18ವರ್ಷದ ಒಳಗೆ)

ಒಂದನೇ ಬಹುಮಾನ: ಶ್ರೀ ಅಂಕಿತ್ ಭಾರದ್ವಾಜ್

ಎರಡನೇ ಬಹುಮಾನ : ಕುಮಾರಿ ನಿಶಿತಾ ಪ್ರಸಾದ್

ಮೂರನೇ ಬಹುಮಾನ : ಕುಮಾರಿ ಪಾವನಿ ಜೋಷಿ

ಹಿರಿಯರ ವಿಭಾಗ (18 ವರ್ಷಕ್ಕೆ ಮೇಲ್ಪಟ್ಟು)

ಒಂದನೇ ಬಹುಮಾನ : ಕುಮಾರಿ ಆರ್. ವರಲಕ್ಷ್ಮಿ

ಎರಡನೇ ಬಹುಮಾನ : ಕುಮಾರಿ ನಾಗಮಣಿ.ಬಿ.

ಮೂರನೇ ಬಹುಮಾನ : ಶ್ರೀಮತಿ ಎಂ.ವಿ.ನಾಗರತ್ನ

ಡಾ. ವಿಜಯಾ ಸುಬ್ಬರಾಜ್ ಅವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯಗೊಂಡಿತು.

---




ಬಸವ: ಇದು ಸಂಸ್ಕೃತ ಶಬ್ದವಾದ 'ವೃಷಭ' ಎಂಬುದರ ತದ್ಭವ. ಇದರ ಮೂಲ ಅರ್ಥ ಹೋರಿ ಅಥವಾ ಎತ್ತು ಎಂದು. ಈ ಅರ್ಥದಲ್ಲಿ ಬ್ರಹ್ಮಶಿವನ 'ಸಮಯ ಪರೀಕ್ಷೆ'ಯಲ್ಲಿ ಈ ಶಬ್ದ ಬಳಕೆಗೊಂಡಿದೆ: "ಬಸವಂ ಸತ್ತಿರ್ದಡೆ ಸಂತಸದಿಂದಂ ಮೀಸಿ ಪೂಜಿಸುತೆ.. .." ದೇವರಿಗೆ ಮೀಸಲಿಡುವ ಹೋರಿಯನ್ನೂ ಬಸವ ಎಂದು ಕರೆಯುತ್ತಾರೆ. ಇಂತಹ ಹೋರಿಗಳ ಮೈಮೇಲೆ ಗುರುತುಮಾಡುವ ಪರಿಪಾಟವೂ ಉಂಟು: "ಬೀದಿಯ ಬಸವಂಗೆ ದೇವಾಲಯದ ಪಶುವಿಂಗೆ ಹುಟ್ಟಿದ ಕರು ಬಸವಗಳಪ್ಪುವೇ ಲಿಂಗಮುದ್ರ ಯನೊತ್ತದನ್ನಕ್ಕರ" ಎಂಬುದು ಚೆನ್ನಬಸವಣ್ಣನ ವಚನದ ಮಾತು. ಇದ-ಕ್ಕೆ 'ಬಸವನ ಮುದ್ರೆ' ಎಂದೇ ಕರೆಯುತ್ತಿದ್ದರು: "ಮುದ್ದು ಮಾಡಿ ಸಾಕಿ ಮಗನಿಗೆ ಬಸವನ ಮುದ್ರೆಯ ಒತ್ತಿದ್ದೆನೇ" ಎಂಬುದು ಪುರಂದರದಾಸರ ಹಾಡಿನ ಮಾತು. ಮುಂದೆ ಅದು ದೇವರ ಮೀಸಲ ಇತರ ಪ್ರಾಣಿಗಳಿಗೂ ಅನ್ವಯವಾಯಿತು, ಮನುಷ್ಯರಿಗೂ ಅನ್ವಯವಾಯಿತು. ಬಸವ ನಂದಿಯ ವಾಹನ ಎಂಬ ಕಾರಣದಿಂದ ಅದು ಜನರಿಗೆ ಪೂಜ್ಯವೂ ಆಯಿತು. 'ಬಸವ ನೋಂಪಿ'ಯ ಪ್ರಸ್ತಾಪ ಅನೇಕ ಕಡೆಗಳಲ್ಲಿದೆ.

ಕನ್ನಡ ತೆಲುಗುಗಳಲ್ಲಿ ಬಸವ ಎಂಬುದು ವ್ಯಕ್ತಿಯ ಅಂಕಿತನಾಮವೂ ಆಗಿದೆ. ಬಸವ ಎಂಬ ಪದಕ್ಕೆ ಅಣ್ಣ, ಅಪ್ಪ, ಅಯ್ಯ ಮುಂತಾದ ಸಂಬಂಧಸೂಚಕ ಪದಗಳೂ ಸೇರುತ್ತವೆ. ಬಸವಣ್ಣ ಕನ್ನಡ ಸಂಸ್ಕೃತಿಯ ಅತ್ಯಂತ ಪ್ರಮುಖ ವ್ಯಕ್ತಿಗಳಲ್ಲೊಬ್ಬ. ಹರಿಹರ ಕನ್ನಡದಲ್ಲಿ 'ಬಸವರಾಜದೇವರರಗಳೆ' ಎಂಬ ಕಾವ್ಯವನ್ನು ಬರೆದರೆ, ಪಾಲ್ಕುರಿಕೆ ಸೋಮನಾಥನು ತೆಲುಗಿನಲ್ಲಿ 'ಬಸವ ಪುರಾಣಮು'ವನ್ನು ರಚಿಸಿದ. ಮೊದಲಿನಿಂದ ಬಂದ ಬಸವಪೂಜೆಯ ಜೊತೆ ಹೊಂದಿಸಿ ಬಸವಣ್ಣನ ಹುಟ್ಟಿದ ದಿನವೆಂದು ಪುರಾಣಗಳಲ್ಲಿ ಉಕ್ತವಾದ ವೈಶಾಖ ಶುದ್ಧ ತದಿಗೆಯನ್ನು 'ಬಸವಜಯಂತಿ'ಯಾಗಿ ಆಚರಿಸುವ ಸಂಪ್ರದಾಯ ಉಂಟಾಯಿತು. ಬಸವ ಎಂಬ ತದ್ಭವ ಶಬ್ದಕ್ಕೆ ಈಶ್ವರ ಸೇರಿಸಿದರೆ ಬಸವೇಶ್ವರ ಎಂಬ ರೂಪವಾಗುತ್ತದೆ, ಹಾಗೆಯೇ ಬಸವಪ್ರಭು. ಬಸವನಗೌಡ ಮುಂತಾದೆಡೆಗಳಲ್ಲಿ ಬಸವಣ್ಣ ಎಂಬುದರ ಕೊನೆಯ ದ್ವಿತ್ವ ಸವಕಳಿಗೊಂಡಿದೆ. ಯಜಮಾನನ ಮಾತಿಗೆ ತಲೆಯಾಡಿಸುವ ಅಲಂಕೃತ ಎತ್ತನ್ನು 'ಕೋಲೆ ಬಸವ' (<ಕೌಲೆ<ಕವಿಲೆ) ಎನ್ನುತ್ತಾರೆ; ಎಲ್ಲದಕ್ಕೂ ಒಪ್ಪುವವನಿಗೂ ಈ ಹೆಸರು ಸಲ್ಲುತ್ತದೆ.

# ಎಂವಿಸೀ – ಬದುಕು – ಒಂದು ನೋಟ – 4

ಒಂದಷ್ಟು ಕಾಲ ಅವರು ಕಾಲೇಜಿನ ವೈಸ್ ಪ್ರಿನ್ಸಿಪಾಲರಾಗಿದ್ದರೂ, ಅಂತಹ ಉಸ್ತುವಾರಿ ಕಾರ್ಯ ಅವರಿಗೆ ಸರಿಹೊಂದುತ್ತಿರಲಿಲ್ಲ. ಹೀಗಾಗಿ ಕೂತ ಕಡೆ–ಯೇ ಮಾಡಬಹುದಾದ ಓದು–ಬರಹ ಅವರನ್ನು ಸದಾ ಕ್ರಿಯಾಶೀಲವಾಗಿಸಿತು. ತಮ್ಮ ಬದುಕಿನುದ್ದಕ್ಕೂ ಅವರು ಸಾಹಿತ್ಯ ಕೃಷಿಯನ್ನು ಮುಂದುವರಿಸಿಕೊಂಡು ಬಂದರು.

ಮೊದಮೊದಲು ಸೀತಾರಾಮಯ್ಯನವರು ಕವನ, ಕತೆ ಕಾದಂಬರಿ, ಪ್ರಬಂಧ ಮುಂತಾದ ಸೃಜನಶೀಲ ಕೃತಿರಚನೆಯಲ್ಲಿ ತೊಡಗಿದ್ದರೂ, ಬರಬರುತ್ತ ಅವರ ಆಸಕ್ತಿ □ 'ಕವಿರಾಜ ಮಾರ್ಗ'ದ ಪರಿಷ್ಕರಣೆಯ ನಂತರ – ಸಂಶೋಧನೆ ಗ್ರಂಥಸಂಪಾದನೆಗಳಂತಹ ವಿದ್ವತ್ ಕಾರ್ಯದ ಕಡೆಗೆ ಹೆಚ್ಚು ಕೇಂದ್ರೀಕೃತವಾಯಿತು. ಈ ವಿಷಯದಲ್ಲಿ ಅವರಿಗೆ ದಿಗ್ದರ್ಶಕವಾಗಿದ್ದ ಮಾತುಗಳೆಂದರೆ, ಬಿಎಂಶ್ರೀ ಧಾರವಾಡದ ವಿದ್ಯಾವರ್ಧಕ ಸಂಘದಲ್ಲಿ 1911 ರ ಡಿಸೆಂಬರ್‌ನಲ್ಲಿ ಮಾಡಿದ್ದ 'ಕನ್ನಡ ಮಾತು ತಲೆಯೆತ್ತುವ ಬಗೆ' ಎಂಬ ಉದ್ಬೋಧಕ ಉಪನ್ಯಾಸ. ಹಾಗಾಗಿ ಓಲೆಪ್ರತಿಗಳ ಸಂಗ್ರಹ, ರಕ್ಷಣೆ, ಅಪ್ರಕಟಿತ ಕೃತಿಗಳ ಪ್ರಕಟಣೆ, ಸಂಶೋಧನೆ – ಇವುಗಳಿಗಾಗಿ ಶಾಶ್ವತ ವ್ಯವಸ್ಥೆಯೊಂದ್ನು ಮಾಡಬೇಕೆಂದು ಆಲೋಚಿಸಿದ ಅವರು ಪೂರ್ವಭಾವಿಯಾಗಿ ನೂರು ಮಂದಿಗೆ ಕಾಗದ ಬರೆದ ಅಭಿಪ್ರಾಯ ಸಂಗ್ರಹ ಮಾಡಿದ್ದರು; ಅವರಲ್ಲಿ ಆ ಕಾಲದ ಹೆಸರಾಂತ ಕನ್ನಡ ವ್ಯಕ್ತಿತ್ವಗಳೆಲ್ಲರೂ ಸೇರಿದ್ದರು; ಮಾಸ್ತಿ, ಮೂರ್ತಿರಾವ್, ನಿಟ್ಟೂರು, ಡಿವಿಜಿ – ಹೀಗೆ. ಎಲ್ಲರೂ ಯೋಜನೆಯನ್ನು ಬೆಂಬಲಿಸಿದ್ದರಿಂದ, ತಾವು ಕನ್ನಡ ದೀಕ್ಷೆ ಪಡೆದ ತಮ್ಮ ಗುರುಗಳ ಹೆಸರಿನಲ್ಲಿ 06–05–1979 ರಂದು ಭಾನುವಾರ ಸಂಜೆ 4–00 ಗಂಟೆಗೆ ಗೋಖಲೆ ಸಾರ್ವಜನಿಕ ಸಂಸ್ಥೆಯ ಆವರಣದಲ್ಲಿ ನಡೆದ ಸ್ಥಾಪಕರ ಮೊದಲ ಸಭೆಯಲ್ಲಿ 'ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ'ವನ್ನು ಹುಟ್ಟುಹಾಕಿದರು. ಮುಂದೆ ಅದು ಹೆಮ್ಮರವಾಗಿ ಬೆಳೆದು ಇಂದು ಪ್ರತಿಷ್ಠಿತ ವಿದ್ವತ್ ಸಂಸ್ಥೆಯೆಂಬ ಮಾನ್ಯತೆಯನ್ನು ಪಡೆದಿದೆ. (ಈ ಬಗ್ಗೆ ಮುಂದೆ ಇನ್ನಷ್ಟು ವಿವರವಾಗಿ ಪ್ರಸ್ತಾಪಿಸಲಾಗಿದೆ).

. ಎಂವಿಸೀ ಬರೆಯಲು ತೊಡಗಿದ ಕಾಲ ನವೋದಯದ ವಸಂತ ಸಮಯ. ಎಲ್ಲೆಡೆಯೂ ಉತ್ಸಾಹದ ಸಾಹಿತ್ಯೋದಯ. ಹತ್ತೊಂಬತ್ತನೆಯ ಶತಮಾನದ ಕೊನೆಯ ದಶಕಗಳಲ್ಲಿ ಸಾಹಿತ್ಯ ಕೃಷಿಗೆ ಭೂಮಿಯನ್ನು ಹರಗುವ ಕೆಲಸಮಾಡಿದ್ದ ಪಂಜೆ ಮಂಗೇಶರಾವ್, ಮುದ್ದಣ, ಶಾಂತಕವಿಗಳು, ಶಿಶುನಾಳ ಶರೀಫ, ಎಸ್. ಜಿ. ನರಸಿಂಹಾಚಾರ್, ವೆಂಕಟಾಚಾರ್ಯ, ಎಂ.ಎನ್. ಕಾಮತ್, ಕೆರೂರು ವಾಸುದೇವಾಚಾರ್ಯ, ಬಸವಪ್ಪಶಾಸ್ತ್ರಿ, ಗೋವಿಂದ ಪೈ ಮುಂತಾದವರ ಕಾರ್ಯವನ್ನು ಬಿಎಂಶ್ರೀ, ಡಿವಿಜಿ,ಕ್ಷೇತ್ರ  ಮಾಸ್ತಿ, ಬೇಂದ್ರೆ, ಕುವೆಂಪು, ಪುತಿನ, ತೀನಂಶ್ರೀ, ಕಾರಂತ, ಡಿಎಲ್‌ಎನ್ ಮುಂತಾದವರು ನಾನಾ ದಿಕ್ಕುಗಳಲ್ಲಿ ಮುಂದುವರಿಸಿದ್ದರು, ಎಲ್ಲಡೆ ಹದಮಳೆಯಾಗಿ ಸಾಹಿತ್ಯದಲ್ಲಿ ಹಸಿರೊಡೆದಿತ್ತು. ಆ ಹಿರಿಯರಿಂದ ಪ್ರೇರಿತರಾಗಿ ಮುಂದಿನ ಪೀಳಿಗೆಯ ಲೇಖಕರು ಸ್ಫೂರ್ತಿ ಪಡೆದು ಅದನ್ನು ಮುಂದುವರಿಸಿದರು.

ಎಂ. ವಿ. ಸೀತಾರಾಮಯ್ಯನವರೂ ಇತರರಂತೆ ಸಾಹಿತ್ಯ ರಚನೆಗೆ ಕೈಹಾಕಿದ್ದು ಈ ಹಿರಿಯರ ಪ್ರೇರಣೆ ಆದರ್ಶಗಳಿಂದಾಗಿಯೇ. ಕಾಲೇಜಿನಲ್ಲಿ ಓದುತ್ತಿದ್ದಾಗಲೇ 1930 ರಲ್ಲಿ 'ಬೀದಿಯೊಳಗಲೆಯುತಿಹಳಾರಿವಳು ಚೆಲುವೆ' ಎಂಬ ಕವನವನ್ನು ಬರೆದು ತೀನಂಶ್ರೀ ಅದನ್ನು ತಿದ್ದಿದ್ದನ್ನೂ, ಆ ಮುಂದೆ ಅವರು ಸರಳ ರಗಳೆಯ ನೀಳ್ಗವನವೊಂದನ್ನು ಬರೆದು ಬಿಎಂಶ್ರೀ ಸ್ವರ್ಣಪದಕವನ್ನು ಪಡೆದುದನ್ನು ಹಿಂದೆಯೇ ನೋಡಿದ್ದೇವೆ. ಆದರೆ ಅವರ ಮೊದಲ ಪುಸ್ತಕಗಳೆರಡು – 'ಶಿಲಾಮುಖ' ಮತ್ತು 'ಯೌವನಸುಧೆ' – ಬೆಳಕು ಕಂಡದ್ದು 1936 ರಲ್ಲಿ. 1946 ರಲ್ಲಿ 'ಹಕ್ಕಿ ಹಾಡು' ಕವನ ಸಂಕಲನಕ್ಕೆ ದೇವರಾಜ ಬಹದ್ದೂರ್ ಬಹುಮಾನ ಹಾಗೂ ಕನ್ನಡ ಸಾಹಿತ್ಯ ಪರಿಷತ್ತಿನ ಬಹುಮಾನಗಳು ದೊರೆತವು. 1951 ರಲ್ಲಿ ಅವರು ತಾವೇ 'ರಾಘವ ಪ್ರಕಾಶನ' ವನ್ನು ಆರಂಭಿಸಿದರು. ಅದರ ಮೂಲಕ ಪ್ರಕಟಗೊಂಡ 'ಮಾದನ ಮಗಳು' ಕಾದಂಬರಿ ಹಾಗೂ 1957 ರಲ್ಲಿ ಪ್ರಕಟಗೊಂಡ 'ಮುಗಿಯದ ಮಾಯೆ' ಕವನ ಸಂಕಲವೂ ದೇವರಾಜ ಬಹದ್ದೂರ್ ಬಹುಮಾನವನ್ನು ಪಡೆದವು. ಮುಂದೆ 'ತೊಟ್ಟಿಲು ತೂಗದ ಕೈ' ನಾಟಕ ಮತ್ತು 'ಜೀವನ ನಾಟಕ' ಕಾದಂಬರಿ □ ಎರಡಕ್ಕೂ ಕ್ರಮವಾಗಿ 1857 ಮತ್ತು 1960 ರಲ್ಲಿ ರಾಜ್ಯಸರ್ಕಾರದ ಪುರಸ್ಕಾರವು ದೊರಕಿತು. 1967 ರಲ್ಲಿ ನಿಡುಮಾಮಿಡಿ ಮಠವು ಅವರಿಗೆ 'ವಿಚಾರ ರತ್ನಾಕರ' ಎಂಬ ಪ್ರಶಸ್ತಿಯಿತ್ತು ಗೌರವಿಸಿತು. ಅವರ 'ಪ್ರಾಚೀನ ಕನ್ನಡ ವ್ಯಾಕರಣಗಳು' ಕೃತಿಗೆ 1980 ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರ ದೊರೆಯಿತು. ಬೆಂಗಳೂರಿನ ಉದಯಭಾನು ಕಲಾಸಂಘವು 1983 ರಲ್ಲಿ 'ಆಸ್ವಾದ' ಎಂಬ ಹೆಸರಿನ ಬೃಹತ್ ಅಭಿನಂದನ ಸಂಪುಟವನ್ನು ಅವರಿಗೆ ಅರ್ಪಿಸಿದೆ. 1985 ರಲ್ಲಿ ಸೀತಾರಾಮಯ್ಯನವರಿಗೆ ರಾಜ್ಯಪ್ರಶಸ್ತಿ ದೊರೆಯಿತು. 1990 ರಲ್ಲಿ ಅವರ ಎಂಬತ್ತನೇ ಹುಟ್ಟುಹಬ್ಬವನ್ನು ಅಭಿನಂದನ ಸಮಿತಿಯೊಂದು ಉತ್ಸಾಹದಿಂದ ಆಚರಿಸಿ ಅವರನ್ನು ಗೌರವಿಸಿತು. ಇವಲ್ಲದೆ, ಹತ್ತಾರು ಸಂಘ ಸಂಸ್ಥೆಗಳು ಅವರ ಕನ್ನಡ ಸೇವೆಯನ್ನು ಗೌರವಿಸಿ ಸನ್ಮಾನ ಮಾಡಿವೆ.

ಅವರ ಕನ್ನಡ ಸೇವೆ ಕೇವಲ ಸಾಹಿತ್ಯ ರಚನೆಗೆ ಮತ್ತು ವಿದ್ವತ್ ಕಾರ್ಯಕ್ಕೆ ಮಾತ್ರ ಮೀಸಲಾಗಿರದೆ ಚಳವಳಿಯಲ್ಲಿ ಭಾಗಿಯಾಗುವುದರ ಮೂಲಕವೂ ತನ್ನ ಕಾರ್ಯವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದೆ.

ಅವರ ದೇಹ ಕುಗ್ಗಿದ್ದರೂ ಚೈತನ್ಯ ಗಟ್ಟಿಯಾಗಿದ್ದುದರಿಂದ ಯುವಜನತೆಯನ್ನು ಉದ್ದೀಪಿಸುವ ಸಾಮರ್ಥ್ಯ ಅವರ ಬರವಣಿಗೆಗೂ ಇತ್ತು, ಮಾತುಗಳಿಗೂ ಇತ್ತು. ಕನ್ನಡ ನಾಡಿನಲ್ಲಿ ಕನ್ನಡ ಭಾಷೆಯ ಕುರಿತಂತೆ ಅನೇಕ ಚಳವಳಿಗಳು ನಡೆದಿವೆ: ಅದು ಕನ್ನಡ ಮಾತನಾಡುವ ಪ್ರದೇಶಗಳ ಏಕೀಕರಣ, ಕನ್ನಡ ಚಿತ್ರಗಳಿಗೆ ಪ್ರೋತ್ಸಾಹ, ಪ್ರೌಢಶಾಲೆಗಳಲ್ಲಿನ ಕಲಿಕೆಯ ಭಾಷೆಗಳ ಸ್ವರೂಪ, ದೂರದರ್ಶನದಲ್ಲಿ ಕನ್ನಡ ಬಳಕೆ, ಇತ್ಯಾದಿಗಳಿಗೆ ಸಂಬಂಧಿಸಿದವು ಅವು. 1980 ರ ದಶಕದಲ್ಲಿ ನಡೆದ ಚಳವಳಿಯೇ 'ಗೋಕಾಕ್ ಚಳವಳಿ'. ಆಗ ಪ್ರೌಢಶಾಲೆಗಳಲ್ಲಿ ಮೊದಲನೆಯ ಭಾಷೆಯಾಗಿ ಆರಿಸಿಕೊಳ್ಳಬಹುದಾದವುಗಳಲ್ಲಿ ಸಂಸ್ಕೃತದಂತಹ ಗ್ರಾಂಥಿಕ ಭಾಷೆಯೂ ಸೇರಿತ್ತು. ಸಂಸ್ಕೃತದ ಕಲಿಕೆ ಪ್ರೌಢಶಾಲೆಯಲ್ಲಿಯೇ ಆರಂಭವಾದರೂ ವಿದ್ಯಾರ್ಥಿಗಳಲ್ಲಿ ಬಹುಮಂದಿ ಅದನ್ನು ಆಯ್ಕೆಮಾಡಿಕೊಳ್ಳುತ್ತಿದ್ದುದು ಸುಲಭವಾಗಿ ಹೆಚ್ಚು ಅಂಕಗಳನ್ನು ಪಡೆಯಬಹುದೆಂಬುದು. ಯಾಕೆಂದರೆ ಸಂಸ್ಕೃತವನ್ನು ಪಾಠ ಮಾಡುತ್ತಿದ್ದುದೂ, ಪರೀಕ್ಷೆಗಳಲ್ಲಿ ವಿದ್ಯಾರ್ಥಿಗಳು ಉತ್ತರ ಬರೆಯಲು ಆರಿಸಿಕೊಳ್ಳುತ್ತಿದ್ದುದೂ ಕನ್ನಡವನ್ನೇ. ಹೀಗಾಗಿ ಸಂಸ್ಕೃತವನ್ನು ಕಲಿಯದೆಯೇ ಹೆಚ್ಚು ಅಂಕ ಪಡೆಯುವ ಪ್ರಲೋಭನೆ ವಿದ್ಯಾರ್ಥಿಗಳು ಕನ್ನಡವನ್ನು ಕಡೆಗಣಿಸಲು ಕಾರಣವಾಗುತ್ತಿತ್ತು. ಇದರಿಂದ ಹಲವರು 'ಕನ್ನಡ ಉಳಿಸಿ' ಚಳವಳಿ ಆರಂಭಿಸಿದರು. ಸಮಸ್ಯೆಯ ಗಾಂಭೀರ್ಯ ವನ್ನು ಅರ್ಥಮಾಡಿಕೊಂಡ ಕರ್ನಾಟಕ ಸರ್ಕಾರ ಪ್ರೌಢಶಾಲೆಗಳಲ್ಲಿ ಕಲಿಸಬೇಕಾದ ಭಾಷೆಗಳ ಸ್ವರೂಪವನ್ನು ಶಿಫಾರಸು ಮಾಡಲು ಪ್ರೊ. ವಿ.ಕೆ. ಗೋಕಾಕ್ ಅವರ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ರಚಿಸಿತು. ಸಮಿತಿ ನಾಡಿನೆಲ್ಲೆಡೆ ಸುತ್ತಿ ಕೊನೆಗೆ ಒಂದು ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿತು. ಅದರ ಪ್ರಕಾರ ಕನ್ನಡ ನಾಡಿನ ಸಕಾರ ಮಾನ್ಯ ಮಾಡಿದ ಎಲ್ಲ ಶಾಲೆಗಗಳಲ್ಲಿ ಕನ್ನಡವು ಏಕೈಕ ಪ್ರಥಮ ಭಾಷೆಯಾಗಬೇಕು. ಕೆಲ ವರ್ಗಗಳಿಂದ ಇದಕ್ಕೆ ವಿರೋಧ ವ್ಯಕ್ತವಾದ ಕಾರಣ ವರದಿಯನ್ನು ಅನುಷ್ಠಾನಗೊಳಿಸಲು ಸರ್ಕಾರ ಹಿಂದೇಟು ಹಾಕಿತು. ಇದರಿಂದ ರೊಚ್ಚಿಗೆದ್ದ ಕನ್ನಡ ಜನತೆ ನಾಡಿನಾದ್ಯಂತ ದೊಡ್ಡ ಚಳವಳಿಯನ್ನು ದೀರ್ಘಕಾಲ ನಡೆಸಿತು. ಅದು 'ಗೋಕಾಕ್ ಚಳವಳಿ' ಎಂದೇ ಪ್ರಸಿದ್ಧವಾಗಿದೆ. ಮುಖ್ಯವಾಗಿ ಧಾರವಾಡ, ಮೈಸೂರು ಮತ್ತು ಬೆಂಗಳೂರುಗಳನ್ನು ಕೇಂದ್ರಗಳಾಗಿ ಹೊಂದಿ ಎಲ್ಲಡೆ ಚಳವಳಿ ಪಸರಿಸಿತು.



ಕಿರು ಪರಿಚಯ

**ಶ್ರೀಮತಿ ಲಲಿತಾ ಸಿದ್ಧಬಸವಯ್ಯ.** ಜನನ: ಫೆಬ್ರುವರಿ 27,1955

ಬಿಎಸ್ಸಿ(ಜೀವಶಾಸ್ತ್ರ) ಪದವಿ




ಉದ್ಯೋಗ: 27 ವರ್ಷ ಸರ್ಕಾರಿ ನೌಕರಳಾಗಿ ಸೇವೆ ಸಲ್ಲಿಸಿ 2001ರಲ್ಲಿ ಸ್ವಇಚ್ಛಾ ನಿವೃತ್ತಿ.

ಪ್ರಕಟಿತ ಪುಸ್ತಕಗಳು: ಏಳು ಕವನ ಸಂಕಲನಗಳು, ನಗೆ ಲೇಖನಗಳು, ಪ್ರಬಂಧ ಸಂಕಲನ, ಕಥಾ ಸಂಕಲನ, ಸ್ಪಟಿಕ ತುಮಕೂರು ಹಿರೇಮಠಶ್ರೀಗಳ ಒಂದು ಸಾವಿರ ಸುಭಾಷಿತ ಸಂಗ್ರಹ ಮತ್ತು ಸಂಪಾದನೆಯ ತಂಡದಲ್ಲಿ ಸಹಸಂಪಾದಕಿ

ಪ್ರಶಸ್ತಿಗಳು: ಬಿಎಂಶ್ರೀ ಕಾವ್ಯ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ಪುಸ್ತಕ ಬಹುಮಾನ 2002, ಕರ್ನಾಟಕ ಸಾಹಿತ್ಯ ಅಕಾಡೆಮಿ ಪುಸ್ತಕ ಬಹುಮಾನ 2010, ಪುತಿನ ಕಾವ್ಯ ಪ್ರಶಸ್ತಿ, ಕಾವ್ಯಾನಂದ ಪ್ರಶಸ್ತಿ, ಮಾಣಿಕ ಬಾಯಿ ಮಹಿಳಾ ಸಾಹಿತ್ಯ ಪ್ರಶಸ್ತಿ, ಇನ್ಫೋಸಿಸ್ ಪ್ರತಿಷ್ಠಾನದ ಸುಧಾ ಮೂರ್ತಿ ಸಾಹಿತ್ಯ ಪ್ರಶಸ್ತಿ, ಬೆಳಗಾವಿಯ ಆಜೂರ ಸಾಹಿತ್ಯ ಪ್ರಶಸ್ತಿ

ವಿಜಾಪುರದ ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯ, ಕರ್ನಾಟಕ ವಿಶ್ವವಿದ್ಯಾಲಯ, ಮೈಸೂರು, ಬೆಂಗಳೂರು, ಧಾರವಾಡ, ತುಮಕೂರು, ಮಂಗಳೂರು, ಶಿವಮೊಗ್ಗ, ಹಂಪೆ, ಜೈನ್, ಕೆ ಎಲ್ ಇ, ಈ ಯೂನಿವರ್ಸಿಟಿಗಳ ಪದವಿಪೂರ್ವ, ಪದವಿಯ ನಾನಾ ಹಂತಗಳ ಪಠ್ಯಗಳಲ್ಲಿ ಕವನಗಳು ಹಾಗೂ ನಾಟಕಗಳು ಸೇರ್ಪಡೆಯಾಗಿವೆ.

**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2018-2020**
**dt. 27-10-2017**
**Office of Posting: Bangalore PSO, Bangalore 560026**
**Price :Annual Subscription Rs. 20/-**
**Date of publishing and Posting : 30-03-2019**

## ಹಸ್ತಪ್ರತಿ ವಿಭಾಗ ಮತ್ತು ಗ್ರಂಥಾಲಯದ ವರದಿ

ಗ್ರಂಥಾಲಯದಲ್ಲಿ ನಿಯತಕಾಲಿಕೆಗಳನ್ನು ಕ್ರಮವಾಗಿ ಸಂಪುಟ, ಸಂಚಿಕೆ ಪ್ರಕಾರವಾಗಿ ಜೋಡಿಸಿ ಅಲ್ಮೇರಾಗಳಲ್ಲಿ ಜೋಡಿಸುವ ಕಾರ್ಯ ಕೈಗೊಳ್ಳಬೇಕಿದೆ. ಹಾಗೆಯೇ, ಕೆಲವು ಅಮೂಲ್ಯವಾದ ಗ್ರಂಥಗಳನ್ನು ನಮ್ಮ ಹಿರಿಯರು ಗ್ರಂಥದಾನ ಮಾಡಿರುತ್ತಾರೆ. ಇಂತಹ ಪುಸ್ತಕಗಳ ಪಟ್ಟಿಯನ್ನು ತಯಾರಿಸಿ ಅಲ್ಮೇರಾಗಳಲ್ಲಿ ದಾನಿಗಳ ಹೆಸರನ್ನು ಸೂಚಿಸಿ ಇಡುವ ಕಾರ್ಯ ಕೈಗೊಳ್ಳಬೇಕು.

ನಮ್ಮ ಸದಸ್ಯರಾದ ಶ್ರೀ ಎನ್. ಸುಂದರೇಶನ್ ಅವರು ಪ್ರತಿಷ್ಠಾನದ ಗ್ರಂಥಾಲಯಕ್ಕೆ "ಭಾರತ ದರ್ಶನ ಪ್ರಕಾಶನ" ಇವರು ಪ್ರಕಟಿಸಿರುವ ಮಹಾಭಾರತ, ರಾಮಾಯಣ, ಭಾಗವತ, ಹರಿವಂಶ ಮತ್ತು ಕೆಲವು ಪುರಾಣಗಳ ಗ್ರಂಥಗಳನ್ನು ಪ್ರತಿಷ್ಠಾನಕ್ಕೆ ದಾನವಾಗಿ ನೀಡಲು ಕ್ರಮ ಕೈಗೊಂಡಿದ್ದಾರೆ. ಹಾಗೂ ಇಪ್ಪತ್ತೈದು ವರ್ಷಗಳ ಅವಧಿಗೆ "ಭಾರತ ದರ್ಶನ" , ಮಾಸ ಪತ್ರಿಕೆಯ ಅಜೀವ ಸದಸತ್ವವನ್ನು ಪ್ರತಿಷ್ಠಾನದ ಹೆಸರಲ್ಲಿ ನೀಡುತ್ತಿದ್ದಾರೆ. ಇವರಿಗೆ ಪ್ರತಿಷ್ಠಾನವು ಅಭಿನಂದನೆಗಳನ್ನು ತಿಳಿಸುತ್ತದೆ.

ಗೋಖಲೆ ಸಾರ್ವಜನಿಕ ಸಂಸ್ಥೆ ನಮ್ಮ ಪ್ರತಿಷ್ಠಾನಕ್ಕೆ ನೀಡಿದ್ದ ಮೂರು ತಾಳೆಗರಿ ಗ್ರಂಥಗಳ ಸಂರಕ್ಷಣಾ ಕಾರ್ಯ ಮುಗಿದಿದ್ದು, ಈಗ ಗ್ರಂಥಗಳ ಸೂಚಿ ಕಾರ್ಯವನ್ನು ಕೈಗೆ ತೆಗೆದುಕೊಂಡಿದೆ. ಕಾರ್ಯ ಪ್ರಗತಿಯಲ್ಲಿದೆ.

ಕಿರುಪರಿಚಯ

**ಪ್ರೊ. ಬಿ.ಪಿ. ವೀರೇಂದ್ರಕುಮಾರ್**

ಕನ್ನಡ ಉಪನ್ಯಾಸಕ, ಸಂದರ್ಶಕ ಪ್ರಾಧ್ಯಾಪಕರು.

ಹಲವು ಅಧ್ಯಯನ ಗ್ರಂಥಗಳನ್ನು ಪ್ರಕಟಿಸಿರುವುದು, 2005 ಅಖಿಲ ಭಾರತ ಸಾಹಿತ್ಯ ಸಮ್ಮೇಳನದಲ್ಲಿ ಪ್ರಕಟಗೊಂಡ 18ಪುಸ್ತಕಗಳ ಸಂಪಾದಕತ್ವ

ಅಧ್ಯಕ್ಷರು : ಚಿತ್ರದುರ್ಗ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು (1988–91)

ಅಧ್ಯಕ್ಷರು : ಅಭಿರುಚಿ ಸಾಹಿತ್ಯ ಸಾಂಸ್ಕೃತಿಕ ವೇದಿಕೆ ಚಿತ್ರದುರ್ಗ(2001–2015)

ಸಂಶೋಧನೆ : ಬುಡಕಟ್ಟು : ವಿಧಿ ಮತ್ತು ಆಚರಣೆ

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ–ಅಂಚೆ

ಶ್ರೀಮತಿ/ಶ್ರೀ.........................................................................

.............................................................................................

.............................................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭